# ನಮ್ಮ ಮಾನಸ

**ಮೇ 2008**

ಸಂಪುಟ : 2    ಸಂಚಿಕೆ : 1



*Editor, Printer and Publisher*
***Rajeshwari H.S.,***
*No. 114/5, 9th Cross, 2nd Main*
*Chamarajpet, Bangalore - 560 018.*
*Mobile : 9449345698*



*Printed at*
***ILA Mudrana***
*No. 36, 40 Ft. Road,*
*Raghavanagara*
*New Timberyard Layout*
*Bangalore - 560 026.*
*© : 26757159*




•

ಚಂದಾ ವಿವರ

| | |
|---|---|
| ಬಿಡಿಪ್ರತಿ | 8–00 ರೂ. |
| ವಾರ್ಷಿಕ ಚಂದಾ (ವಿಶೇಷ ಸಂಚಿಕೆಯೊಂದಿಗೆ) | 100–00 ರೂ. |
| ಸಂಸ್ಥೆಗಳಿಗೆ | 150–00 ರೂ. |

## ಪರಿವಿಡಿ






# ನಮ್ಮ ಮಾನಸ

114/5, 9ನೇ ತಿರುವು, 2ನೇ ಮುಖ್ಯರಸ್ತೆ, ಚಾಮರಾಜಪೇಟೆ
ಬೆಂಗಳೂರು – 560 018

ಚಂದಾಹಣವನ್ನು ಈ ವಿಳಾಸಕ್ಕೆ ಚೆಕ್ ಅಥವಾ
ಡಿ.ಡಿ. ಮೂಲಕ ಕಳಿಸಬಹುದು

– – –

ಮೈಸೂರಿನಲ್ಲಿ ಓದುಗರು ಪ್ರತಿಗಳಿಗೆ ಹಾಗೂ
ಚಂದಾ ನವೀಕರಣಕ್ಕೆ ಸಂಪರ್ಕಿಸಿ

**ವೆಂ. ವನಜ**

*2329, 12ನೇ ಮೈನ್, 2ನೇ ಹಂತ, ವಿಜಯನಗರ*
*ಮೈಸೂರು – 570 017*



ಸಂಪಾದಕೀಯ

# ಮಹಿಳೆಯರಲ್ಲಿ ಆಂತರಿಕ ಕಲಹ, ಒಡಕು ಹುಟ್ಟು ಹಾಕುವ ಪಕ್ಷಗಳ ಹುನ್ನಾರ

ಮಾರ್ಚ್ 8 ಮಹಿಳಾ ದಿನಾಚರಣೆ, ಮೇ 1 ಕಾರ್ಮಿಕರ ದಿನಾಚರಣೆ. ಮಹಿಳೆಯಾಗಿ, ಕಾರ್ಮಿಕಳಾಗಿ ಈ ದೇಶದ ಹೆಣ್ಣು ಯಾವ ರೀತಿಯ ನ್ಯಾಯವನ್ನೂ ಪಡೆಯದೇ ಶತಮಾನಗಳಿಂದಲೂ ವಂಚಿತಳಾಗಿದ್ದರೂ, ಚುನಾವಣೆಯ ಸಂದರ್ಭದಲ್ಲಿ 'ವೋಟ್ ಬ್ಯಾಂಕ್' ಆಗಿ ಹೆಚ್ಚು ಕೇಂದ್ರೀಕರಿಸಲ್ಪಡುತ್ತಿದ್ದಾಳೆ ಎಂಬುದು ನೋವಿನ ಹಾಗೂ ವಿಪರ್ಯಾಸದ ಸಂಗತಿಯಾಗಿದೆ. ಚುನಾವಣೆಯ ಸಂದರ್ಭದಲ್ಲಿ ನಡೆಯುವ ಗಿಮಿಕ್‌ಗಳಿಗೆ ಬಲಿಯಾಗದೇ ನಮ್ಮನ್ನು ನಾವು ಸ್ಪಷ್ಟ ಪಡಿಸಿಕೊಳ್ಳಬೇಕಾಗಿದೆ ಮತ್ತು ನಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳುವತ್ತ ಹೋರಾಟದ ಹೆಜ್ಜೆ ಹಾಕಬೇಕಾಗಿರುವುದನ್ನು ಈ ದೇಶದ ಅಧಿಕಾರ ರಾಜಕಾರಣಕ್ಕೆ ನಾವು ಸವಾಲಾಗಬೇಕೆಂಬುದನ್ನು ಈಗ ನಡೆಯುತ್ತಿರುವ ಚುನಾವಣೆಯ ಸಂದರ್ಭದಲ್ಲಿ ನಾವು ಮನದಟ್ಟು ಮಾಡಿಕೊಳ್ಳಬೇಕಾಗಿದೆ.

ದೇಶದ ಜನಸಂಖ್ಯೆಯ ಅರ್ಧದಷ್ಟು ಮಹಿಳೆಯರು ನಮ್ಮ ರಾಜ್ಯದ ಭವಿಷ್ಯವನ್ನು ನಿರ್ಧರಿಸುವ ಶಕ್ತಿಯಾಗಿದ್ದಾರೆ. ಇದನ್ನು ಅರಿತೇ ವಿವಿಧ ರಾಜಕೀಯ ಪಕ್ಷಗಳು ತಮ್ಮ ಸಾಂಪ್ರದಾಯಿಕ ದೃಷ್ಟಿಕೋನದಲ್ಲಿ ಮಹಿಳೆಯರನ್ನು ಓಲೈಸಲು ಪ್ರಯತ್ನಿಸುವುದರ ಜೊತೆಗೆ ಮಹಿಳೆಯರ ಬಗ್ಗೆ ವಿರೋಧೀ ಹೇಳಿಕೆಗಳನ್ನೂ ನೀಡುತ್ತಾರೆ. ತಮ್ಮ ವಿರುದ್ಧ ಸ್ಪರ್ಧಿಸುವವರು ಹೆಂಗಸು ಎಂದು ತಿಳಿದ ಮಾಜಿ ಮುಖ್ಯ ಮಂತ್ರಿಯೊಬ್ಬರು 'ಆ ಪಕ್ಷದಲ್ಲಿ ನನ್ನ ವಿರುದ್ಧ ಸ್ಪರ್ಧಿಸಲು ಗಂಡಸರೇ ಇಲ್ಲವೇ?' ಎಂದು ಪ್ರತಿಕ್ರಿಯಿಸಿದ್ದಾರೆ. ಇನ್ನೂ ಮುಂದುವರಿದು ಕೆಲವರು 'ಶಿಖಂಡಿ' ಪದವನ್ನೂ ಬಳಸಿದ್ದಾರೆ. ಈ ವ್ಯಕ್ತಿ ಹಿಂದೆಯೂ 'ನಾನೇನೂ ಬಳೆ ತೊಟ್ಟುಕೊಂಡಿಲ್ಲ' ಎಂಬ ಹೇಳಿಕೆ ಕೊಟ್ಟು ವಿರೋಧ ಎದುರಿಸಿದ್ದರು. ಅಂದರೆ ಲಿಂಗತ್ವದ ಬಗ್ಗೆ ಇವರಿಗಿರುವ ಸೂಕ್ಷ್ಮತೆ ಎಷ್ಟು ಎಂಬುದನ್ನು ಅರ್ಥೈಸಿಕೊಳ್ಳಬಹುದು. ಸೀರೆಯಿಂದ ಹೆಂಗಸರನ್ನು ಓಲೈಸುವುದು ಸ್ವಲ್ಪ ಹಳೆಯದಾಯಿತೆನ್ನಿಸಿರಬೇಕು. ಈಗ ಸೀರೆಯ ಜೊತೆಗೆ ಹೆರಿಗೆ ಭತ್ಯೆ, ಆರತಿ ತಟ್ಟೆಗೆ ದುಡ್ಡು, ಮೂಗುತಿಯನ್ನು ನೀಡುವುದಾಗಿ ತಮ್ಮ ಹೆಗ್ಗಳಿಕೆಯನ್ನು ಪ್ರದರ್ಶಿಸುತ್ತಿದ್ದಾರೆ. ಮಹಿಳೆಯರಿಗೆ ಶೌಚಾಲಯದ್ದೇ ದೊಡ್ಡ ಸಮಸ್ಯೆ ಎಂಬುದು ಈಗ ಚುನಾವಣೆಯ ಸಂದರ್ಭದಲ್ಲಿ ಕೆಲವು ರಾಜಕೀಯ ಪಕ್ಷಗಳಿಗೆ ಜ್ಞಾನೋದಯವಾಗಿದೆ. ಹಾಗಾಗಿ ಕುಟುಂಬಗಳಿಗೆ ಶೌಚಾಲಯ ಕಟ್ಟಿಸುವುದಾಗಿ ಪ್ರಣಾಳಿಕೆಯಲ್ಲಿ ಪ್ರಕಟಿಸುತ್ತಿದ್ದಾರೆ. ಜೊತೆಗೆ ಸ್ತ್ರೀಶಕ್ತಿ ಗುಂಪುಗಳಿಗೆ ಸಹಾಯಧನ ಹೆಚ್ಚಿಸುವುದು, ಸ್ತ್ರೀಶಕ್ತಿಭವನ ನಿರ್ಮಿಸುವುದು, ಹೆಣ್ಣು ಮಕ್ಕಳಿಗೆ ವಿದ್ಯಾಭ್ಯಾಸ, ಮನೆಗೊಂದು ಬಣ್ಣದ ಟಿ.ವಿ., 2ರೂಗೆ ಕೆ.ಜಿ.ಅಕ್ಕಿ ಹೀಗೆ ಹತ್ತು ಹಲವಾರು ಪೊಳ್ಳು ಅಶ್ವಾಸನೆ ನೀಡಿ ಮಹಿಳೆಯರ ಓಟು ಪಡೆಯಲು ಪ್ರಯತ್ನಿಸಲಾಗುತ್ತಿದೆ. ಈ ರೀತಿಯ ಆಮಿಷಗಳಿಂದ ಹೆಂಗಸನ್ನು ಅವಮಾನಿಸಲಾಗುತ್ತಿದೆಯಲ್ಲದೇ ಆಕೆಯನ್ನು ಮೂರ್ಖಳೆಂದು ಬಗೆಯುವ ಎಲ್ಲಾ ರಾಜಕೀಯ ಪಕ್ಷಗಳ ಹುನ್ನಾರಗಳ ಬಗ್ಗೆಯೂ ಮಹಿಳೆಯರು ಜಾಗೃತರಾಗುವುದು ಮುಖ್ಯ.

ಹಳ್ಳಿಗಳಲ್ಲಿ ಸಾರಾಯಿ ಮಾರಾಟ ನಿಲ್ಲಿಸಲು ಹೋರಾಡಿ, ಮಾರಾಟ ನಿಲ್ಲಿಸುವಂತೆ ಮಾಡಿದ ಮಹಿಳೆಯರ ಹೋರಾಟಗಳು ಈಗ ಚರಿತ್ರೆಯಾಗಿವೆ. ಸಾರಾಯಿ ಮಾರಾಟದ ನಿಷೇಧ ಮಾಡುವುದು ಆಡಳಿತದಲ್ಲಿರುವ ಪಕ್ಷಗಳಿಗೆ ಅನಿವಾರ್ಯವಾಗಿತ್ತು. ಅದನ್ನೇ ಒಂದು ಸಾಧನೆಯ ಹೆಜ್ಜೆ ಎಂದು ಹೇಳಿಕೊಳ್ಳುವ ಪಕ್ಷಗಳು ಚುನಾವಣೆಯ ಸಂದರ್ಭದಲ್ಲಿ ಸಾರಾಯಿ ಹಂಚಲು ಅಕ್ರಮವಾಗಿ ಸಂಗ್ರಹಿಸಿರುವುದು –ಈ ದೇಶದ ಮಹಿಳೆಯರಿಗೆ, ಅದರಲ್ಲೂ ಶೋಷಿತ ವರ್ಗದ, ಹಿಂದುಳಿದ ಮಹಿಳೆಯರಿಗೆ ತೋರಿಸುತ್ತಿರುವ ಅಗೌರವ ಎಂದೇ ನಾವು ತಿಳಿಯಬೇಕಾಗಿದೆ.

ಎಲ್ಲಾ ರಾಜಕೀಯ ಪಕ್ಷಗಳ ಕಣ್ಣು ಈಗ ಗ್ರಾಮೀಣ ಪ್ರದೇಶಗಳಲ್ಲಿ ಸ್ತ್ರೀಶಕ್ತಿ ಮೂಲಕ ಸಂಘಟಿತರಾದ ಮಹಿಳೆಯರ ಮೇಲಿದೆ. ಈಗಾಗಲೇ ಇಂತಹ ಗುಂಪುಗಳನ್ನು ರಾಜಕೀಯ ಸಭೆಗಳಿಗೆ, ಸರ್ಕಾರಿ ಕಾರ್ಯಕ್ರಮಗಳಿಗೆ ಕರೆದುಕೊಂಡು ಹೋಗಲಾಗುತ್ತಿದೆ. ಸರ್ಕಾರಿ ಕಾರ್ಯಕ್ರಮವೊಂದರಲ್ಲಿ ಸೀರೆಯುಟ್ಟು, ಆರತಿತಟ್ಟೆ ಹಿಡಿದು ಮೆರವಣಿಗೆ ಹೋಗುವುದನ್ನು ಮಹಿಳೆ ಮತ್ತು ಕಲ್ಯಾಣ ಇಲಾಖೆಯ ಅಧಿಕಾರಿಗಳು ಅಂಗನವಾಡಿ ಕಾರ್ಯಕರ್ತೆಯರ ಮೂಲಕ ಮಾಡಿಸಿದ್ದಾರೆ. ಸ್ಥಳೀಯ ರಾಜಕೀಯ ನಾಯಕರು ಸ್ತ್ರೀಶಕ್ತಿ ಗುಂಪಿನ ಮುಖ್ಯಸ್ಥರಿಗೆ ಹಣನೀಡಿ ಮತ ಹಾಕಿಸುವಂತೆ ಒತ್ತಡ ಹೇರುವುದು ಕಂಡು ಬರುತ್ತಿದೆ. ಹಣ ತೆಗೆದುಕೊಂಡ ಮುಖ್ಯಸ್ಥರು ಸಂಘದ ಖಾತೆಗೆ ಹಣ ಹಾಕಿರುವುದು, ಕೆಲವರು ಹಂಚಿಕೊಂಡಿರುವುದು ಇಂತಹ ನಿದರ್ಶನಗಳೂ ಇವೆ. ಕೆಲವು ಸ್ತ್ರೀಶಕ್ತಿ ಸಂಘಗಳಲ್ಲಿ ವಿಭಿನ್ನ ಪಕ್ಷ ಪ್ರತಿನಿಧಿಸುವ ಹೆಂಗಸರ – ಗಂಡಂದಿರ ಭಿನ್ನಾಭಿಪ್ರಾಯಗಳಿಂದಾಗಿ ಸಂಘಗಳಲ್ಲಿ ಆಂತರಿಕ ಕಲಹ–ಕಿತ್ತಾಟಗಳು ಕಂಡುಬರುತ್ತವೆ. ಹೀಗೆ ಚುನಾವಣೆ ರಾಜಕೀಯ ಮಹಿಳೆಯರಲ್ಲಿ ಆಂತರಿಕ ಕಲಹ, ಒಡಕು ಹುಟ್ಟು ಹಾಕುವ ಹುನ್ನಾರಗಳನ್ನು ನಡೆಸುತ್ತಿದೆ.

ವಿದ್ಯಾವಂತ ಮಹಿಳೆಯರು ರಾಜಕೀಯವೆಂದರೆ ಅಲರ್ಜಿ ಎಂಬ ಭಾವನೆಯನ್ನು ಬೆಳೆಸಿಕೊಂಡಿದ್ದಾರೆ. ರಾಜಕೀಯದಲ್ಲಿರುವ

ವಿಪರ್ಯಾಸಗಳಿಂದಾಗಿ ರಾಜಕೀಯದಿಂದ ದೂರವಿರುವುದೇ ತಮ್ಮ ವ್ಯಕ್ತಿತ್ವದ ಘನತೆ ಎಂದು ಕೆಲವರು ತಿಳಿಯುತ್ತಾರೆ. ಇದಕ್ಕೆ ಸರಿಯಾಗಿ ರಾಜಕೀಯ ಪಕ್ಷಗಳು ಮಹಿಳಾ ಮತದಾರರನ್ನು ಪ್ರಜ್ಞಾವಂತ ಮತದಾರರೆಂದು ಭಾವಿಸುವುದೇ ಇಲ್ಲ. ಮಹಿಳೆ–ಕುಟುಂಬದ ಯಜಮಾನನ ಮಾತು ಕೇಳುವ ನಿಷ್ಕ್ರಿಯ ಮತದಾರಳೆಂದೇ ಅವರ ಭಾವನೆ. ಹಾಗಾಗಿ ಇವರ ಯೋಜನೆಗಳು – ಆರತಿ ತಟ್ಟೆ, ಸೀರೆ, ಬಳೆ, ಇಂತಹದುರ ಸುತ್ತಲೇ ಗಿರಕಿ ಹೊಡೆಯುತ್ತಿವೆ. ಒಂದು ಅಧ್ಯಯನದ ಪ್ರಕಾರ ಹಿಂದುಳಿದ, ಅನಕ್ಷರತೆಯಿರುವ ರಾಜ್ಯಗಳಲ್ಲಿ ಚುನಾವಣೆಯಲ್ಲಿ ಸ್ಪರ್ಧಿಸುವ ಮಹಿಳೆಯರ ಸಂಖ್ಯೆ ಹೆಚ್ಚಿದ್ದರೆ, ಅಕ್ಷರತೆಯ ಪ್ರಮಾಣ ಹೆಚ್ಚಿರುವ ರಾಜ್ಯಗಳಲ್ಲಿ ಮಹಿಳೆಯರ ರಾಜಕೀಯ ಭಾಗವಹಿಸುವಿಕೆ ಕನಿಷ್ಠ ಪ್ರಮಾಣದಲ್ಲೂ ಇಲ್ಲ. ಹಿಂದುಳಿದ, ಅನಕ್ಷರಸ್ಥ ಮಹಿಳೆಯರ ರಾಜಕೀಯದ ಒಟ್ಟು ಹಿಡಿತ ಪುರುಷರ ನಿಯಂತ್ರಣದಲ್ಲಿ ಇರುತ್ತದೆ ಎಂಬುದನ್ನು ನಾವು ಗಮನಿಸಬೇಕು.

ಚುನಾವಣೆ ನಡೆಸುವುದಕ್ಕಾಗಿ ಸಾವಿರಾರು ಮಹಿಳೆಯರನ್ನು ಒತ್ತಾಯ ಪೂರ್ವಕವಾಗಿ ಪೋಲಿಂಗ್‌ಗೆ ಕರೆದೊಯ್ಯಲಾಗುತ್ತಿದೆ. 30% ರಾಜಕೀಯ ಮೀಸಲಾತಿ ಕೊಡುವಾಗ, ಸ್ಪರ್ಧಿಸಲು ಸೀಟು ಕೊಡುವಾಗ ಮಹಿಳೆಯರ ಸಾಮರ್ಥ್ಯಗಳನ್ನು ಅನುಮಾನಿಸಲಾಗುತ್ತಿದೆ. ಆದರೆ, ಚುನಾವಣೆ ನಡೆಸುವ ಪ್ರಕ್ರಿಯೆಯಲ್ಲಿ ಅವರ ಪ್ರಾಮಾಣಿಕತೆ, ಸಾಮರ್ಥ್ಯ ಎತ್ತಿ ಹಿಡಿಯಲಾಗುತ್ತದೆ !

P.R.O.ಗಳಾಗಿ ಹಾಗೂ ಇತರ ಪೋಲಿಂಗ್ ಅಧಿಕಾರಿಗಳಾಗಿ ಹೋಗುವ ಸಾವಿರಾರು ಮಹಿಳೆಯರಿಗೆ ಯಾವ ರಕ್ಷಣೆಯಾಗಲೀ ವಿಶೇಷ ಸೌಲಭ್ಯಗಳಾಗಲೀ ಇರುವುದಿಲ್ಲ. ಶೌಚಾಲಯ ಇರುವುದಿಲ್ಲ. ತಿಂಗಳ ಕೂಸಿಗೆ ಮೊಲೆಯೂಡಿಸುವ ತಾಯಿಗೆ ಕ್ರೇಚ್ ವ್ಯವಸ್ಥೆ ಇರುವುದಿಲ್ಲ. ಚುನಾವಣೆ ಪ್ರಕ್ರಿಯೆಗೆ ಮಹಿಳೆ ಬೇಕು. ಮತ ಹಾಕಲು ಮಹಿಳೆ ಬೇಕು, ಆದರೆ ಲಿಂಗ ಸೂಕ್ಷ್ಮತೆಯ ಪ್ರಶ್ನೆ ಬಂದಾಗ ಮಾತ್ರ ಮಹಿಳೆ ಎತ್ತುವ ಪ್ರಶ್ನೆಗಳು–ಮಹಿಳೆಯ ಅಸ್ತಿತ್ವ ಪ್ರಭುತ್ವಕ್ಕೆ ಒಂದು ದೊಡ್ಡ ಪ್ರಶ್ನೆ ಎನಿಸುವುದೇ ಇಲ್ಲ; ಸವಾಲೆನಿಸುವುದೂ ಇಲ್ಲ.

ಹಾಗಾಗಿ ಈ ಚುನಾವಣೆಯಲ್ಲಿ ನಾವು ಮತ್ತಷ್ಟು ಜಾಗೃತರಾಗಬೇಕು. ಈ ದೇಶದ ಅಧಿಕಾರ ರಾಜಕಾರಣ. ಹೆಂಗಸರನ್ನು ಅವಮಾನಿಸುತ್ತಿರುವ, ನಿರ್ಲಕ್ಷ್ಯ ಮಾಡುತ್ತಿರುವ ಸಿಟ್ಟು, ಕುದಿತಗಳು ನಮ್ಮ ಜಾಗೃತಿಗೆ ಕಾರಣಗಳಾಗಬೇಕು. ಹೆಂಗಸರನ್ನು ದುರ್ಬಳಕೆ ಮಾಡಿಕೊಂಡಂತಹ ರಾಜಕಾರಣಿಗಳಿಗೆ ನಮ್ಮ ಮತ ಸಲ್ಲದು ಎಂಬ ಎಚ್ಚರಿಕೆ ನಮಗಿರಬೇಕು. ಈ ದೇಶದ ಪ್ರಜಾಪ್ರಭುತ್ವದಲ್ಲಿ ಲಿಂಗ ಸಮಾನತೆಗಾಗಿ ದುಡಿಯುವ ಮನಸ್ಸುಗಳಿದ್ದಲ್ಲಿ ಅದನ್ನು ಗುರುತಿಸಿ ನಮ್ಮ ಮತ ನೀಡುವುದು ಅಗತ್ಯವಾಗಿದೆ.

* * *

## ವಸ್ತ್ರ ಸಂಹಿತೆಯ ಉದ್ದೇಶ?

ಹೈಕೋರ್ಟ್ ಮುಖ್ಯ ನ್ಯಾಯಮೂರ್ತಿ ಸಿರಿಯಾಕ್ ಜೋಸೆಫ್ ಹಾಗೂ ರಾಜ್ಯ ಮಾನವ ಹಕ್ಕುಗಳ ಆಯೋಗದ ಅಧ್ಯಕ್ಷ ಎಸ್.ಆರ್.ನಾಯಕ್‌ರವರು ಮಹಿಳೆಯರು ಧರಿಸುವ ಉಡುಪಿನ ಬಗ್ಗೆ. ಮತ್ತು ರಾತ್ರಿ ಹೊತ್ತು ಸಂಚರಿಸುವ ಬಗ್ಗೆ ನೀಡಿರುವ ಹೇಳಿಕೆಗಳನ್ನು ಮಹಿಳಾ ಸಂಘಟನೆಗಳು ಪ್ರತಿಭಟಿಸಿರುವುದು ಸಮರ್ಥನೀಯವಾಗಿದೆ. ಮಹಿಳೆಯರು ಧರಿಸುವ ಉಡುಪಿಗೂ ಅವರ ಮೇಲೆ ನಡೆಯುವ ದೌರ್ಜನ್ಯಕ್ಕೂ ತಳುಕು ಹಾಕುವುದು ಹಿಂದಿನಿಂದ ನಡೆಯುತ್ತಲೇ ಬಂದಿದೆ. 'ವಸ್ತ್ರಸಂಹಿತೆ'ಯ ವಿಚಾರದಲ್ಲಿ ಮಹಿಳಾ ಸಂಘಟನೆಗಳು ಪ್ರತಿಭಟಿಸುವುದರ ಜೊತೆಗೆ ವಿವಿಧ ಸ್ವರೂಪದ ಹಿಂಸೆಯ ಕಾರಣಗಳನ್ನು ಸ್ವರೂಪಗಳನ್ನು ಆಳವಾಗಿ ವಿಶ್ಲೇಷಿಸುತ್ತಲೇ ಬಂದಿದ್ದಾರೆ.

ಗಂಭೀರವಾದ ಉಡುಗೆಯೆಂದರೇನು? ತಲೆಯಿಂದ ಕಾಲಿನವರೆಗೆ ಬಟ್ಟೆ ತೊಡುವುದರಿಂದ ಮಹಿಳೆಯರು ಸುರಕ್ಷಿತವಾಗಿರಬಹುದೆ? ಎಳೆಯ ವಯಸ್ಸಿನ ಹೆಣ್ಣು ಮಕ್ಕಳ ಮೇಲೆ ನಡೆಯುವ ಅತ್ಯಾಚಾರ, ಶಾಲಾ ಹೆಣ್ಣು ಮಕ್ಕಳ ಮೇಲೆ ಶಿಕ್ಷಕರು ನಡೆಸುವ ಲೈಂಗಿಕ ದೌರ್ಜನ್ಯ, ತಂದೆ ಮಗಳ ಮೇಲೆ ನಡೆಸುವ ಅತ್ಯಾಚಾರ, ವಯಸ್ಸಾದ ಮಹಿಳೆಯರ ಮೇಲೆ ನಡೆಯುವ ಅತ್ಯಾಚಾರಕ್ಕೆ ಕಾರಣವೇನೆಂದು ಹೇಳಬೇಕೆ? ಇತ್ತೀಚಿಗೆ ಶ್ರೀನಿವಾಸಪುರದಲ್ಲಿ ಮೂರುವರ್ಷದ ಹಸುಳೆಯ ಮೇಲೆ ಅತ್ಯಾಚಾರ ನಡೆಸಿ ಕೊಲೆ ಮಾಡಿದ್ದನ್ನು ಹೇಗೆ ವಿಶ್ಲೇಷಿಸಬೇಕು? ಬಹಳಷ್ಟು ಅತ್ಯಾಚಾರದ ಪ್ರಕರಣಗಳು ಪರಿಚಿತರು, ನೆರೆಹೊರೆಯವರು, ಹತ್ತಿರದ ಸಂಬಂಧಿಕರಿಂದ ನಡೆಯುತ್ತಿರುವುದು ಸಾಬೀತಾಗಿದೆ. ಯುದ್ಧದ ಸಂದರ್ಭದಲ್ಲಿ, ಕೋಮುಗಲಭೆಯ ಸಂದರ್ಭದಲ್ಲಿ, ಆಸ್ತಿಗೆ ಸಂಬಂಧಿಸಿದ ವಿವಾದಗಳು ಅಂತಿಮಗೊಳ್ಳುವುದು ಸಹ ವೈರಿಗಳ ಸೊತ್ತೆಂದು ಭಾವಿಸಲಾದ ಮಹಿಳೆಯರ ಮೇಲೆ ಅತ್ಯಾಚಾರ ಮಾಡುವ ಮೂಲಕ. ಇತ್ತೀಚಿಗೆ ದಕ್ಷಿಣ ಆಫ್ರಿಕಾದ ಜೊಹಾನ್ಸ್ ಬರ್ಗ್‌ನಲ್ಲಿ ಇಪ್ಪತ್ತೈದು ವರ್ಷದ ಮಹಿಳೆಯೊಬ್ಬಳು ಮಿನಿಸ್ಕರ್ಟ್ ಧರಿಸಿದ್ದಳೆಂಬ ಕಾರಣಕ್ಕೆ ಅವಳ ಮೇಲೆ ಹಲ್ಲೆ ನಡೆಸಲಾಯಿತು. ಪಾಶ್ಚಾತ್ಯ ಮಾದರಿಯ ಉಡುಪಿನ ಮಾದರಿ ನಮ್ಮ ದೇಶಕ್ಕಿಂತ ಭಿನ್ನವಾಗಿದ್ದರೂ, ಅವರೂ ಸಹ ದೌರ್ಜನ್ಯಕ್ಕೆ ಬಲಿಯಾಗುತ್ತಿದ್ದಾರೆ!

ಮಹಿಳೆಯರ ಮೇಲೆ ನಡೆಯುತ್ತಿರುವ ಅತ್ಯಾಚಾರ, ಲೈಂಗಿಕ ದೌರ್ಜನ್ಯಗಳಿಗೆ ಮುಖ್ಯ ಕಾರಣ ಸ್ತ್ರೀಯರನ್ನು ಭೋಗವಸ್ತುವೆಂದು ಪರಿಗಣಿಸುವ ಧೋರಣೆ. ಈ ಮೌಲ್ಯಗಳನ್ನು ಮೈಗೂಡಿಸಿಕೊಂಡ ಪುರುಷರು ಇಂತಹ ಅಪರಾಧ ನಡೆದಾಗ ಬಲಿಪಶುವಾದ ಮಹಿಳೆಯಲ್ಲಿ ತಪ್ಪು ಕಂಡುಹಿಡಿದು, ಅವಳ ಚಲನವಲನ, ಉಡುಪು, ನಡತೆ ಮುಂತಾದವುಗಳು ಕಾರಣವೆಂದು ಆರೋಪಿಸುತ್ತಾ, ಅವಳನ್ನು ಪುನಃ ನಾಲ್ಕುಗೋಡೆಗೆ ಸೀಮಿತಗೊಳಿಸುವ ಹುನ್ನಾರವಿದು. ಪುರುಷನ ದೌರ್ಬಲ್ಯವನ್ನು ಕುರಿತು ಮಾತನಾಡದೆ 'ಅವನ ತಪ್ಪಿಗೆ ಅವಳ ಉಡುಪು ಕಾರಣ' ಎಂದು ವ್ಯಾಖ್ಯಾನಿಸುವ ಮನಸ್ಸುಗಳಿಗೆ ಸೂಕ್ಷ್ಮತೆಯೇ ಇಲ್ಲವಾಗಿದೆಯಲ್ಲ! ಇತರ ಎಲ್ಲಾ ಶೋಷಿತರ ಸಮಸ್ಯೆಗಿಂತ, ಮಹಿಳೆಯರ ಸಮಸ್ಯೆಯ ವಿಶಿಷ್ಟತೆ ಹಾಗೂ ಸಂಕೀರ್ಣತೆಯನ್ನು ಗುರುತಿಸಿದಾಗ ಮಾತ್ರ ಸಮಸ್ಯೆಯ ಒಳನೋಟ ಗೋಚರಿಸಲು ಸಾಧ್ಯ.

* * *

'ಮಾನಸ' ಪತ್ರಿಕೆ ಎರಡು ದಶಕಕ್ಕೂ ಮೀರಿ ನಡೆದು ಬಂತು. 'ನಮ್ಮ ಮಾನಸ' ಆದ ಮೇಲೆ ಹನ್ನೆರಡು ಸಂಚಿಕೆಗಳು ಬಂದಿವೆ. ಒಂದು ವರ್ಷ ಯಶಸ್ವಿಯಾಗಿ ನಡೆಸಲು ನೀವು ಕಾರಣವಾದಿರಿ. ನಮ್ಮ ಸಂತೋಷ, ನಿಮ್ಮದೂ ಹೌದು. ಶುಭವಾಗಲಿ.

**ಕಾರ್ಮಿಕ ದಿನಾಚರಣೆಯ ಸಂದರ್ಭದಲ್ಲಿ ಎಲ್ಲ ವಲಯದ ಕಾರ್ಮಿಕ ಸಂಗಾತಿಗಳಿಗೆ, ಮಾನಸದ ಶುಭಾಶಯಗಳು.**

❑

# ರಾಜಕೀಯ ಪಕ್ಷಗಳಿಗೆ ಮಹಿಳೆಯರ ಹಕ್ಕೊತ್ತಾಯಗಳು

- ಸಮಾನತಾ ಮಹಿಳಾ ವೇದಿಕೆ
- ವಿಮೋಚನಾ
- ಸ್ಪಂದನ, ಚನ್ನಪಟ್ಟಣ
- ಹೆಂಗಸರ ಹಕ್ಕಿನ ಸಂಘ
- ಸ್ತ್ರೀಜಾಗೃತಿ ಸಮಿತಿ
- ಮಾನಸ
- ಪೆಡೆಸ್ಟ್ರಿಯನ್ ಪಿಕ್ಚರ್ಸ್
- ಹೆಚ್. ಆರ್. ಎಲ್. ಎನ್

**ಪೀಠಿಕೆ**

ಕರ್ನಾಟಕದಲ್ಲಿ ಸದ್ಯದಲ್ಲೇ ನಡೆಯಲಿರುವ ವಿಧಾನಸಭಾ ಚುನಾವಣೆಗಳ ಸಂದರ್ಭದಲ್ಲಿ ಕರ್ನಾಟಕದ ಎಲ್ಲಾ ಸಾಮಾನ್ಯ ಮಹಿಳೆಯರ ಪರವಾಗಿ, ಮಹಿಳಾ ಹಕ್ಕುಗಳ ಕಾರ್ಯಕರ್ತರುಗಳಾದ ನಾವು, ನಾಡಿನ ಎಲ್ಲರ ಅವಗಾಹನೆಗಾಗಿ ಮತ್ತು ಚುನಾವಣೆಯಲ್ಲಿ ಸ್ಪರ್ಧಿಸಲಿರುವ ಪಕ್ಷಗಳ ಪ್ರತಿಕ್ರಿಯೆಗಾಗಿ ಈ ಹಕ್ಕೊತ್ತಾಯಗಳನ್ನು ಮುಂದಿಡುತ್ತಿದ್ದೇವೆ. ಹಲವು ರೀತಿಗಳಲ್ಲಿ ದಿನನಿತ್ಯ ಮಹಿಳೆಯರ ಕಷ್ಟಕೋಟಲೆಗಳಿಗೆ ಸ್ಪಂದಿಸುತ್ತಿರುವ ನಾವು, ಸದಾ ನಿರ್ಲಕ್ಷಿಸಲ್ಪಟ್ಟಿರುವ ಮಹಿಳಾ ಸಮುದಾಯದ ದನಿಯನ್ನು ಗಟ್ಟಿಯಾಗಿ ಎತ್ತಿ ಹೇಳುವುದು ನಮ್ಮ ಹಕ್ಕು ಮತ್ತು ಹೊಣೆಗಾರಿಕೆಯೆಂದೇ ಭಾವಿಸುತ್ತೇವೆ.

ನಮ್ಮ ಸಮಾಜವು ನಾಗರಿಕವೆಂದು ಗುರುತಿಸಿಕೊಂಡು ಶತಮಾನಗಳೇ ಕಳೆದರೂ ಮಹಿಳೆಯರು, ದಲಿತರು, ಆದಿವಾಸಿಗಳೇ ಮೊದಲಾದ ತುಳಿತಕ್ಕೊಳಗಾದ ಸಮುದಾಯಗಳು ಅವೇ ಪುರಾತನ ದಮನಕಾರಿ ಮೌಲ್ಯಗಳ ಹೊರೆಯನ್ನು ಹೊರಬೇಕಾಗಿದೆ. ಮಹಿಳೆಯರನ್ನು ಕೇವಲ ಕುಟುಂಬದ ಸೇವಕಿಯರನ್ನಾಗಿ, ಭೋಗದ ವಸ್ತುವಾಗಿ, ಸಂತಾನಾಭಿವೃದ್ಧಿಯ ಯಂತ್ರವನ್ನಾಗಿ ಪರಿಗಣಿಸಿರುವ ಪುರುಷಾಧಿಪತ್ಯದ ಹಲವು ರೂಪಗಳ ವಿರುದ್ಧ ಈಗಲೂ ಹೋರಾಡುತ್ತಲೇ ಇದ್ದೇವೆ. ಕೆಲವೊಮ್ಮೆ ಇಂತಹ 'ಮಹಿಳಾ ಸಮಸ್ಯೆಗಳಿಗೆ' ಹೆಂಗಸರು ಸ್ಪಂದಿಸುವುದು ಸಹಜವೆಂದು ತಿಳಿಯಲಾಗುತ್ತದೆ. ಆದರೆ ಈ ಚೌಕಟ್ಟಿನಿಂದಾಚೆಯ ಪ್ರಪಂಚಕ್ಕೇನಾದರೂ ಕಾಲಿಡುವ, ಒಪ್ಪಿತ ಮೌಲ್ಯಗಳನ್ನು ಪ್ರಶ್ನಿಸುವ ಧೈರ್ಯವನ್ನು ಮಹಿಳೆಯರು ತೋರಿದರೆ ಅದಕ್ಕೆ ಕಟುವಾದ ಪ್ರತಿಕ್ರಿಯೆಯನ್ನೇ ಎದುರಿಸಬೇಕಾಗುತ್ತದೆ. ಆದ್ದರಿಂದಲೇ ಅನೇಕ ಸಾಮಾಜಿಕ-ರಾಜಕೀಯ ವಲಯಗಳು ಮಹಿಳೆಯರಿಗೆ ಅಪರಿಚಿತವಾಗಿಯೇ ಉಳಿಯುತ್ತವೆ ಅಥವಾ ಸಂಬಂಧವಿಲ್ಲದವುಗಳಂತೆ ಕಾಣುತ್ತವೆ.

ಆದರೆ ನಾವು ಮಹಿಳಾ ಪ್ರಶ್ನೆಯನ್ನು ಒಂದು ರಾಜಕೀಯ ವಿಚಾರವೆಂದೂ, ಮಹಿಳೆಯರ ಇಂದಿನ ಪರಿಸ್ಥಿತಿ ಸಾಮಾಜಿಕ-ಆರ್ಥಿಕ ಶ್ರೇಣೀಕರಣ ಮತ್ತು ಅಸಮಾನತೆಯ ಫಲವೆಂದೂ ಭಾವಿಸುತ್ತೇವೆ. ಮಹಿಳೆಯರ ಸ್ಥಿತಿಗತಿಗೆ ಸಂಬಂಧಪಟ್ಟ ಯಾವುದೇ ವಿಷಯವೂ ಈ ದೇಶದ ರಾಜಕೀಯ ವ್ಯವಸ್ಥೆಯಿಂದ ಹೊರತಾದುದಲ್ಲ. ಈ ದೇಶದ ಪ್ರಜೆಗಳಾದ, ಈ ದೇಶದ ಜನಸಂಖ್ಯೆಯಲ್ಲಿ ಅರ್ಧದಷ್ಟಿರುವ ನಮ್ಮ ಬೇಡಿಕೆಗಳು, ಮಹಿಳೆಯರಿಗಷ್ಟೇ ಸಂಬಂಧಿಸಿದವಲ್ಲ; ಬದಲಿಗೆ ಅವು ಸಾರ್ವತ್ರಿಕವಾದ ಮಹತ್ವವನ್ನೂ ಹೊಂದಿವೆ. ಅವು ನೇರವಾಗಿ ಈ ದೇಶದ ಪ್ರಜಾತಂತ್ರಕ್ಕೆ ಸಂಬಂಧಿಸಿವೆ. ನಿಜವಾದ ಪ್ರಜಾತಂತ್ರ ಸ್ಥಾಪನೆಗೊಳ್ಳಬೇಕಾದರೆ, ಗಟ್ಟಿಗೊಳ್ಳಬೇಕಾದರೆ ಅದು ಸಂಬಂಧಪಟ್ಟ ಎಲ್ಲಾ ಸಮುದಾಯಗಳನ್ನೂ ಒಳಗೊಳ್ಳುವುದು ಬಹಳ ಮುಖ್ಯ. ಆದರೆ ಅರ್ಧ ಭಾರತ, ಅಂದರೆ ಮಹಿಳೆಯರು ಎಲ್ಲಾ ರೀತಿಯ ತೀರ್ಮಾನ ಕೈಗೊಳ್ಳುವ ಪ್ರಕ್ರಿಯೆಯಿಂದ, ಆಡಳಿತ ವ್ಯವಸ್ಥೆಯಿಂದ ಹೊರಗೆಯೆ ಇರಿಸಲ್ಪಟ್ಟಿದ್ದಾರೆ.

ನಮ್ಮ ಸಂವಿಧಾನವು ಆರು ದಶಕಗಳ ಹಿಂದೆಯೇ ಸ್ತ್ರೀ-ಪುರುಷರ ಸಮಾನತೆಯನ್ನು ಘೋಷಿಸಿದ್ದರೂ, ವಾಸ್ತವ ಅದಕ್ಕಿಂತ ಬಹಳ ಭಿನ್ನವಾಗಿದೆ. ಸಾಮಾಜಿಕ-ಆರ್ಥಿಕ-ರಾಜಕೀಯ ಕ್ಷೇತ್ರಗಳಲ್ಲಿ ಸಮಾನ ಅವಕಾಶಗಳಿಗಾಗಿ, ಸಮಾನ ಹಕ್ಕುಗಳಿಗಾಗಿ ಮಹಿಳೆಯರು ಈಗಲೂ ಗುದ್ದಾಡಬೇಕಾಗಿದೆ. ಮಾತ್ರವಲ್ಲ, ಲಿಂಗತಾರತಮ್ಯದ ವಿಚಾರ ಬಂದಾಗಲೆಲ್ಲ ಮಹಿಳೆಯರ ಮೇಲೆ ಹೊರಿಸಲಾಗುವ ಅನರ್ಹತೆಯ ಆರೋಪಕ್ಕೆ ವಿರುದ್ಧವಾಗಿ ಪದೇಪದೇ ತಮ್ಮನ್ನು ಸಾಬೀತುಪಡಿಸಿಕೊಳ್ಳಬೇಕಾಗಿದೆ. ತಮ್ಮ ಮೇಲೆ ನಿರಂತರವಾಗಿ ನಡೆಯುತ್ತಿರುವ ಮತ್ತು ಹೊಸ ರೂಪಗಳಲ್ಲಿ ಹೆಚ್ಚುತ್ತಿರುವ ಹಿಂಸೆ-ಅನ್ಯಾಯಗಳ ವಿರುದ್ಧ ಹೋರಾಡಬೇಕಾಗಿದೆ. ತಮ್ಮ ಪ್ರತಿಭಟನೆಯ ದನಿಯನ್ನು ಹತ್ತಿಕ್ಕುವ ಹಿತಾಸಕ್ತಿಗಳನ್ನು ದಿಟ್ಟತನದಿಂದ ಎದುರಿಸಬೇಕಾಗಿದೆ. ಇಂತಹ ಒತ್ತಡದ ಸನ್ನಿವೇಶದಲ್ಲೂ ಮಹಿಳೆಯರು ಎದೆಗುಂದದೆ ಇವೆಲ್ಲವನ್ನೂ ಒಂದಲ್ಲಾ ಒಂದು ಮಟ್ಟದಲ್ಲಿ, ಕೆಲವೊಮ್ಮೆ ಏಕಾಂಗಿಗಳಾಗಿ, ಕೆಲವೊಮ್ಮೆ ಸಂಘಟಿತರಾಗಿ ನಿಭಾಯಿಸುತ್ತಿದ್ದಾರೆಂಬುದು ಮುಖ್ಯವಾದ ವಿಷಯ. ಇಂತಹ ಪ್ರಯತ್ನಗಳು ತಕ್ಷಣದಲ್ಲಿ ಪ್ರತಿಫಲ ನೀಡದಿರಬಹುದು. ಆದರೆ ಪ್ರಜಾತಂತ್ರದ ಜಾರಿಯಲ್ಲಿ ನಮ್ಮ ಸಂಪೂರ್ಣ ಭಾಗೀದಾರಿಕೆಗಾಗಿ ನಮ್ಮ ಬೇಡಿಕೆಗಳ ಈಡೇರಿಕೆಗಾಗಿ ಒತ್ತಾಯಿಸುವುದು ನಮ್ಮ ಹಕ್ಕುಗಳನ್ನು ಪಡೆಯುವ ಹೋರಾಟದ ಬಹುಮುಖ್ಯ ಭಾಗವಾಗಿದೆ. ಇಂತಹ ನಿರಾಶರಾಗದ ನಿರಂತರ ಪ್ರಯತ್ನದ ಭಾಗವಾಗಿಯೇ ರಾಜ್ಯ ಚುನಾವಣೆಯಂತಹ ಮುಖ್ಯವಾದ ಸಂದರ್ಭದಲ್ಲಿ ನಮ್ಮ ಹಕ್ಕೊತ್ತಾಯಗಳನ್ನು ರಾಜಕೀಯ ಹೇಳಿಕೆಯ ರೂಪದಲ್ಲಿ ಮುಂದಿಡುವುದು ಪ್ರಜ್ಞಾವಂತರಾದ ನಮ್ಮ ಕರ್ತವ್ಯ ಮತ್ತು ಜವಾಬ್ದಾರಿಯೆಂದು ತಿಳಿದಿದ್ದೇವೆ.

**ಕರ್ನಾಟಕದಲ್ಲಿ ಮಹಿಳೆಯರ ಇಂದಿನ ಸ್ಥಿತಿಗತಿ**

ಕರ್ನಾಟಕದಲ್ಲಿ ಕಳೆದ ಕೆಲವು ದಶಕಗಳಲ್ಲಷ್ಟೇ ನಿರ್ದಿಷ್ಟವಾಗಿ ಮಹಿಳೆಯರ ಸ್ಥಿತಿಗತಿಯ ಕುರಿತಾದ ಅಧ್ಯಯನಗಳು ಹೆಚ್ಚಾಗಿ ನಡೆಯುತ್ತಿವೆ. ಹೀಗಾಗಿ ಈ ಹಿಂದಿನ ಪರಿಸ್ಥಿತಿಯನ್ನು ಅಂಕಿ-ಅಂಶಗಳ ಸಹಿತ ಹೋಲಿಸುವುದು ಸಾಧ್ಯವೇ ಇಲ್ಲ. ಆದರೆ ಇದೇ ನೆಲದಲ್ಲಿ ಬದುಕುತ್ತಿರುವ ನಾವು ನಮ್ಮ ಪರಿಸ್ಥಿತಿಯನ್ನೂ, ನಮ್ಮ ಸುತ್ತಲಿನ ಸನ್ನಿವೇಶವನ್ನೂ ಅರ್ಥಮಾಡಿಕೊಳ್ಳುವುದು ಕಷ್ಟವಲ್ಲ. ಕರ್ನಾಟಕದ ಜನಸಂಖ್ಯೆಯಲ್ಲಿ ಸುಮಾರು ಮೂರುಕೋಟಿ ಮಹಿಳೆಯರು, ಪ್ರತಿ 1000 ಗಂಡಸರಿಗೆ 964 ಮಂದಿ ಮಹಿಳೆಯರಿದ್ದಾರೆಂದು ಲಿಂಗಾನುಪಾತದ ಅಧ್ಯಯನಗಳು ಹೇಳುತ್ತವೆ. ಇವರಲ್ಲಿ ಶೇ. 64 ರಷ್ಟು ಗ್ರಾಮೀಣ ಕರ್ನಾಟಕದಲ್ಲಿ ವಾಸಿಸುತ್ತಿದ್ದರೆ, ಉಳಿದ ಶೇ. 36 ಮಂದಿ ಪಟ್ಟಣಗಳಲ್ಲಿ ಮತ್ತು ಬೆಂಗಳೂರು ಮಹಾನಗರದಲ್ಲಿ ವಾಸಿಸುತ್ತಾರೆ. 2001 ರ ಜನಗಣತಿಯಂತೆ ಒಟ್ಟು ಕರ್ನಾಟಕದ ಸಾಕ್ಷರತಾ ಪ್ರಮಾಣ 67%. ಅದರಲ್ಲಿ ಪುರುಷರು ಶೇ. 76 ರಷ್ಟು ಸಾಕ್ಷರರಾಗಿದ್ದರೆ, ಮಹಿಳೆಯರು ಕೇವಲ ಶೇ. 57ರಷ್ಟು, ಉತ್ತರ ಕರ್ನಾಟಕದ ಹಳ್ಳಿಗಳಲ್ಲಿ ಈ ಪ್ರಮಾಣ ಇನ್ನೂ ಕಡಿಮೆಯಿದೆ. ಕರ್ನಾಟಕದ ಸಾಮಾನ್ಯ ಮಹಿಳೆಯರಲ್ಲಿ ಶೇ. 50 ಮಂದಿ ರಕ್ತಹೀನತೆಯಿಂದ ಮತ್ತು ಅದರಿಂದ ಉಂಟಾಗುವ ಹಲವು ರೀತಿಯ ಆರೋಗ್ಯದ

ಸಮಸ್ಯೆಗಳಿಂದ ನರಳುತ್ತಿದ್ದಾರೆ. ದಕ್ಷಿಣ ಭಾರತದ ನಾಲ್ಕು ರಾಜ್ಯಗಳಲ್ಲಿ ಮಹಿಳಾ ಆರೋಗ್ಯದ ದೃಷ್ಟಿಯಲ್ಲಿ ಕರ್ನಾಟಕ ಕೊನೆಯ ಸ್ಥಾನದಲ್ಲಿದೆ. ಇಲ್ಲಿನ ಶೇ. 30 ರಷ್ಟು ಮಹಿಳೆಯರು ಪ್ರತಿದಿನ ತಾವು ತಿನ್ನಬೇಕಾದ ಸರಾಸರಿ ಆಹಾರದಲ್ಲಿ ಅರ್ಧದಷ್ಟನ್ನೂ ಕೂಡಾ ಪಡೆಯಲಾರದ ಸ್ಥಿತಿಯಲ್ಲಿದ್ದಾರೆ. ಹೀಗೆ ಸರ್ಕಾರಗಳು ನಮ್ಮ ರಾಜ್ಯವನ್ನು ಸುವರ್ಣ ಕರ್ನಾಟಕವೆಂದು ಘೋಷಿಸಿದರೂ, ಇಲ್ಲಿನ ಮಹಿಳೆಯರ ಬದುಕು ಹೆಚ್ಚೇನೂ ಹೊಳೆಯುತ್ತಿಲ್ಲ.

ವಿಶಾಲವಾದ ದೃಷ್ಟಿಯಲ್ಲಿ ಎಲ್ಲಾ ಮಹಿಳೆಯರೂ ಒಂದಲ್ಲಾ ಒಂದು ರೀತಿಯ ಲಿಂಗಾಧರಿತವಾದ ಸಮಸ್ಯೆಗಳಿಗೆ ಗುರಿಯಾಗಿರುತ್ತಾರೆ. ಆದರೆ ಗ್ರಾಮೀಣ ಮತ್ತು ದಲಿತ ಮಹಿಳೆಯರು, ಪಟ್ಟಣಗಳಲ್ಲಿ ಅಸಂಘಟಿತ ಕಾರ್ಮಿಕರಾಗಿ ದುಡಿಯುತ್ತಿರುವ ಮಹಿಳೆಯರು ಹಾಗೂ ಅಲ್ಪಸಂಖ್ಯಾತ ಸಮುದಾಯಗಳಿಗೆ ಸೇರಿದ ಮಹಿಳೆಯರ ಸಮಸ್ಯೆಗಳು ಅವರ ಬಡತನದ ಕಾರಣಕ್ಕಾಗಿ ಇನ್ನಷ್ಟು ಆಳವಾಗಿರುತ್ತವೆ; ತೀವ್ರವಾಗಿರುತ್ತವೆ. ಆದ್ದರಿಂದ ಅವರ ಸ್ಥಿತಿಗತಿಯ ಬಗ್ಗೆ ವಿಶೇಷವಾಗಿ ಗಮನ ಕೊಡುವ ಅಗತ್ಯವಿದೆ.

### ಗ್ರಾಮೀಣ ಕರ್ನಾಟಕದಲ್ಲಿ ಮಹಿಳೆಯರು

ಕರ್ನಾಟಕದ ಮೂರನೇಎರಡು ಭಾಗದಷ್ಟು ಮಹಿಳೆಯರು ಗ್ರಾಮೀಣ ಭಾಗಗಳಲ್ಲಿದ್ದಾರೆ. ಒಂದು ಅಧ್ಯಯನದ ಪ್ರಕಾರ ಹಳ್ಳಿಗಳ ಶ್ರಮಶಕ್ತಿಯ ಶೇ. 65 ಕ್ಕಿಂತ ಹೆಚ್ಚು ಭಾಗವನ್ನು ಮಹಿಳೆಯರೇ ಪೂರೈಸುತ್ತಿದ್ದಾರೆ. ಶೇ. 56 ಮಂದಿ ಮಹಿಳೆಯರು ತಮ್ಮ ಮನೆಕೆಲಸದ ಜೊತೆಗೆ ಕುಟುಂಬದ ಒಡೆತನದ ಜಮೀನಿನಲ್ಲಿ ವ್ಯವಸಾಯದ ಕೆಲಸದಲ್ಲೂ ಸೇರುತ್ತಾರೆ. ಈ ದುಡಿಮೆಯ ಫಲವಾದ ಲಾಭಾಂಶವೆಲ್ಲ ಕುಟುಂಬದ ಗಂಡಸರ ಕೈಯಲ್ಲಿರುವುದರಿಂದ ಮಹಿಳೆಯರಿಗೆ ಯಾವ ಸ್ವಂತ ಆದಾಯವೂ ಇರುವುದಿಲ್ಲ. ಶೇ. 49 ಮಂದಿ ಮಹಿಳೆಯರು ಇತರರ ಜಮೀನಿನಲ್ಲಿ ಕೂಲಿಗೂ ಹೋಗುತ್ತಾರೆ. (ಈ ಪ್ರಮಾಣ ಗಂಡಸರಲ್ಲಿ ಶೇ. 30) ಆದರೆ ಈ ಶ್ರಮಕ್ಕೆ ಅವರಿಗೆ ದೊರೆಯುವುದು ಗಂಡಸರಿಗೆ ಸಿಗುವುದರಲ್ಲಿ ಅರ್ಧದಷ್ಟು ಕೂಲಿ ಮಾತ್ರ. ಜೊತೆಗೆ ಕೃಷಿ ಸಂಬಂಧಿತ ಹೈನುಗಾರಿಕೆಯಂತಹ ಕೆಲಸಗಳನ್ನು ಬಿಟ್ಟರೆ, ಗ್ರಾಮೀಣ ಯುವಜನತೆಗೆ ಬೇಕಾದ ಉದ್ಯೋಗಾವಕಾಶಗಳನ್ನು ಸ್ಥಳೀಯವಾಗಿ ಒದಗಿಸಲು ಯಾವ ಸರ್ಕಾರಗಳೂ ಆಸಕ್ತಿ ತೋರಿಲ್ಲ. ಆದ್ದರಿಂದ ಹಳ್ಳಿಗಳ ಯುವತಿಯರು ದೂರದ ಊರುಗಳಿಗೆ ಹೋಗಲಾಗದೆ ನಿರುದ್ಯೋಗಿಗಳಾಗಿದ್ದಾರೆ.

ಇಂದಿಗೂ ಕರ್ನಾಟಕದ ಹಳ್ಳಿಗಳ ಬಹುಪಾಲು ಹೆಣ್ಣುಮಕ್ಕಳಿಗೆ ಜಮೀನಿನ ಮೇಲೆ ಯಾವ ಅಧಿಕಾರವೂ ಇರುವುದಿಲ್ಲ. ಕಾರಣ, ಮೊದಲನೆಯದಾಗಿ ಸುಮಾರು ಶೇ. 30 ಮಹಿಳೆಯರ ಕುಟುಂಬಗಳಿಗೆ ಕೃಷಿಭೂಮಿಯೇ ಇಲ್ಲ ಅಥವಾ ಇದ್ದರೂ ಸರಾಸರಿ 0.09 ಎಕರೆಗಳಿಗಿಂತ ಕಡಿಮೆ (ಹೆಚ್ಚಾಗಿ ದಲಿತ ಕುಟುಂಬಗಳಲ್ಲಿ). ಹೀಗಾಗಿ ಒಡೆತನದ ಪ್ರಶ್ನೆಯೇ ಇಲ್ಲ. ಎರಡನೆಯದಾಗಿ, ಸರ್ಕಾರದ ಕೆಲವು ಯೋಜನೆಗಳಲ್ಲಿ (ಉಳುವವರಿಗೆ ಭೂಮಿ, ಒತ್ತುವರಿ ಸಕ್ರಮ ಇತ್ಯಾದಿ) ಜಮೀನು ವಿತರಣೆಯಾಗಿದ್ದರೆ, ಎಲ್ಲಾ ಕಡೆ ಅದನ್ನು ಕುಟುಂಬದ ಗಂಡಸರ ಹೆಸರಿಗೆ ದಾಖಲು ಮಾಡಿಸಲಾಗಿದೆಯೇ ಹೊರತು ಮಹಿಳೆಯರನ್ನು ಪರಿಗಣಿಸಿಯೇ ಇಲ್ಲ. ಮೂರನೆಯದಾಗಿ, ಕೆಲವೊಮ್ಮೆ ಕಾನೂನು ಪ್ರಕಾರ ಗಂಡನ ಮನೆಯ ಅಥವಾ ತವರು ಮನೆಯ ಆಸ್ತಿಯಲ್ಲಿ ಪಾಲು ಪಡೆಯುವ ಅಧಿಕಾರ ಇದ್ದಾಗಲೂ, ಆ ಕುರಿತಾದ ಸರಿಯಾದ ಮಾಹಿತಿ ಇಲ್ಲದೆ ಅಥವಾ ಸಾಕಷ್ಟು ಬೆಂಬಲವಿಲ್ಲದೆ ಮಹಿಳೆಯರು ಆಸ್ತಿಹಕ್ಕಿನಿಂದ ವಂಚಿತರಾಗುತ್ತಾರೆ. ಹೀಗಾಗಿ ಗ್ರಾಮೀಣ ಹೆಣ್ಣುಮಕ್ಕಳ ಸ್ಥಿತಿ ಅತಂತ್ರವಾಗಿಯೇ ಇರುತ್ತದೆ. ಇದರೊಂದಿಗೆ ಹಲವಾರು ರೀತಿಯ ತೀವ್ರವಾದ ಸಮಸ್ಯೆಗಳನ್ನು ಹಳ್ಳಿಗಳ ಮಹಿಳೆಯರು ಎದುರಿಸುತ್ತಿದ್ದಾರೆ.

ಒಂದೆಡೆ ಹಳ್ಳಿಗಳಲ್ಲಿ ಹಿಂದಿನಿಂದ ಚಾಲ್ತಿಯಲ್ಲಿರುವ ಕುಟುಂಬದೊಳಗಿನ ಅಸಮಾನ ಸಂಬಂಧಗಳು-ಕಟ್ಟುಪಾಡುಗಳನ್ನು ಈಗಿನ ಮಹಿಳೆಯರು ಒಪ್ಪಲು ಸಿದ್ಧರಿಲ್ಲ. ಈ ರೀತಿಯ ಮಾರ್ಪಾಡುಗಳಿಗೆ ಒಗ್ಗಿಕೊಳ್ಳಲಾರದ ಕುಟುಂಬದ ಸದಸ್ಯರಿಂದ ಬಹಳಷ್ಟು ಮಹಿಳೆಯರು ಹಿಂಸೆಗೊಳಗಾಗುತ್ತಿದ್ದಾರೆ. ಬಹಳ ಮುಖ್ಯವಾಗಿ ದಲಿತ ಮಹಿಳೆಯರು ಕುಟುಂಬದ ಒಳಗೂ ಹೊರಗೂ ಇಬ್ಬಗೆಯ ಶೋಷಣೆಗೆ ತುತ್ತಾಗುತ್ತಿದ್ದಾರೆ. ಮನೆಯೊಳಗಿನ ಹಲವು ಸಮಸ್ಯೆಗಳೊಂದಿಗೆ ಅವರು ಮೇಲ್ಜಾತಿಗಳ ಪುರುಷರ ದಬ್ಬಾಳಿಕೆಗೆ ಗುರಿಯಾಗುತ್ತಿದ್ದಾರೆ. ಅದರಲ್ಲೂ ಕೆಲವು ದಶಕಗಳಿಂದ ಸಂಘಟಿತರಾಗಿ ದನಿಯೆತ್ತುತ್ತಿರುವ ದಲಿತರ ಸ್ವಾಭಿಮಾನವನ್ನು ಸಹಿಸಲಾರದ ಪಟ್ಟಭದ್ರರ ಹಿಂಸಾಚಾರಕ್ಕೆ ಬಹುತೇಕ ಸಂದರ್ಭಗಳಲ್ಲಿ ದಲಿತ ಮಹಿಳೆಯರೇ ತುತ್ತಾಗಿರುತ್ತಾರೆ. 2004 ರಲ್ಲಿ ಬಳ್ಳಾರಿಯ ವಣೇನೂರಿನಲ್ಲಿ ದಲಿತ ಮಹಿಳೆ ಎರ್ರಮ್ಮಳನ್ನು ಬೆತ್ತಲೆ ಮೆರವಣಿಗೆ ಮಾಡಿದ ಅಮಾನುಷವಾದ ದೌರ್ಜನ್ಯದಂತಹ ಸಾವಿರಾರು ಘಟನೆಗಳು ನಡೆಯುತ್ತಲೇ ಬಂದಿವೆ. ಕಿರುಕುಳ, ಬಹಿಷ್ಕಾರ, ಅತ್ಯಾಚಾರ ಮತ್ತು ಮಾಟಮಂತ್ರದ ಸುಳ್ಳು ಆರೋಪದ ಮೇಲೆ ದಲಿತ ಮಹಿಳೆಯರ ಕೊಲೆಗಳು ಈಗಲೂ ರಾಜಾರೋಷವಾಗಿ ನಡೆಯುತ್ತವೆ.



ಹೆಚ್ಚಾಗಿ ಗ್ರಾಮೀಣ ಭಾಗದಲ್ಲಿ ಈಗಲೂ ಬಾಲ್ಯವಿವಾಹಗಳು ಸಹಜವೆಂಬಂತೆ ನಡೆಯುತ್ತಿವೆ. ಉತ್ತರ ಕರ್ನಾಟಕದ ಹಳ್ಳಿಗಳಲ್ಲಿ ಇದು ಹೆಣ್ಣುಮಕ್ಕಳ ಪ್ರಮುಖ ಸಮಸ್ಯೆಗಳಲ್ಲೊಂದಾಗಿದೆ. ಜೊತೆಗೆ ಕಳೆದ ದಶಕದಿಂದೀಚೆಗೆ ಆತಂಕಕಾರಿಯಾಗಿ ಹೆಚ್ಚಿರುವ ಹೆಣ್ಣುಮಕ್ಕಳ ಸಾಗಾಣಿಕೆಗೆ ಹಳ್ಳಿಗಳ ಕಡುಬಡತನದಲ್ಲಿರುವ ಮಹಿಳೆಯರೇ ಬಲಿಪಶುಗಳಾಗುತ್ತಿದ್ದಾರೆ. ಪರರಾಜ್ಯಗಳಿಗೆ ಮತ್ತು ಗಡಿಯಾಚೆಗೂ ಕೂಡಾ ಸಾಗಿಸಲ್ಪಡುವ ಕರ್ನಾಟಕದ ಹೆಣ್ಣುಮಕ್ಕಳಲ್ಲಿ ಶೇ. 70ಕ್ಕಿಂತ ಹೆಚ್ಚು ಮಂದಿ ಹಳ್ಳಿಗಳ ಮತ್ತು ದಲಿತ ಸಮುದಾಯಕ್ಕೆ ಸೇರಿದವರಾಗಿದ್ದಾರೆ!

ಇತ್ತೀಚೆಗೆ ರಭಸ ಪಡೆದುಕೊಂಡಿರುವ ಸ್ತ್ರೀಶಕ್ತಿ ಸ್ವಸಹಾಯ ಗುಂಪುಗಳು ಹಳ್ಳಿಯ ಹೆಣ್ಣುಮಕ್ಕಳ ಬದುಕಿನಲ್ಲಿ ಸಣ್ಣಮಟ್ಟದ ಬದಲಾವಣೆ ತಂದಿರುವುದು ವಾಸ್ತವ. ಈ ಯೋಜನೆಗಳ ಹಿಂದೆ ಬಡವರ ದುಡ್ಡನ್ನೂ ಸಂಗ್ರಹಿಸಿ ಬಂಡವಾಳವಾಗಿಸುವ ತಂತ್ರವಿರುವುದು ಈಗಾಗಲೇ ಸಾಬೀತಾಗಿರುವ ಸತ್ಯ. ಆದರೆ ಆ ನೆಪದಲ್ಲಾದರೂ ಸಾಮೂಹಿಕವಾಗಿ ಒಂದೆಡೆ ಸೇರಿದ್ದು, ಆರ್ಥಿಕವಾಗಿ ಸ್ವಲ್ಪ ಸ್ವಾವಲಂಬಿಗಳಾಗಿದ್ದು, ಮಹಿಳೆಯರಲ್ಲಿ ಸ್ವಾಭಿಮಾನ ಮತ್ತು ಧೈರ್ಯ ಮೂಡಿಸಿದೆ. ಆದರೆ ಇಲ್ಲಿಯವರೆಗೂ ಈ ಮಹಿಳೆಯರ ನೋವಿಗೆ ಎಂದೂ ಮಿಡಿಯದವರೂ ಇತ್ತೀಚೆಗೆ ಸಂಘಗಳನ್ನು ರಾಜಕೀಯದ ದುರುದ್ದೇಶಕ್ಕೆ ಬಳಸುತ್ತಿರುವುದು ದುರಂತ.

**ಪಟ್ಟಣಗಳು ಮತ್ತು ನಗರಗಳಲ್ಲಿ ಮಹಿಳೆಯರ ಪರಿಸ್ಥಿತಿ**

ಕರ್ನಾಟಕದ ನಗರ ಪ್ರದೇಶಗಳಲ್ಲಿರುವ ಮಹಿಳೆಯರಲ್ಲಿ ಶೇ. 40 ಮಂದಿ ಸಂಪೂರ್ಣ ಉದ್ಯೋಗಸ್ಥೆಯರೂ, ಇನ್ನು ಶೇ. 35 ಮಂದಿ ಅರೆ ಉದ್ಯೋಗಸ್ಥೆಯರೂ ಆಗಿದ್ದಾರೆ. ಇವರಲ್ಲಿ ಸಂಘಟಿತ ಕ್ಷೇತ್ರದಲ್ಲಿರುವ ಮಹಿಳೆಯರು ಶೇ. 18 ಮಾತ್ರ. ಅಸಂಘಟಿತ ಕ್ಷೇತ್ರದಲ್ಲಿ ದುಡಿಯುತ್ತಿರುವವರಲ್ಲಿ ಶೇ. 80ಕ್ಕಿಂತ ಹೆಚ್ಚು ಮಹಿಳೆಯರೇ ಆಗಿದ್ದಾರೆ. ಅವರಲ್ಲಿ ಸಿದ್ಧಉಡುಪು ಕೈಗಾರಿಕೆಯ ಕಾರ್ಮಿಕರು, ಕಟ್ಟಡ ಕಾರ್ಮಿಕರು, ಪೌರಕಾರ್ಮಿಕರು, ಅಂಗಡಿ-ಮಳಿಗೆಗಳಲ್ಲಿ ವ್ಯಾಪಾರ ಮಾಡುವ ಮಹಿಳೆಯರು. ಮನೆಕೆಲಸದ ಮಹಿಳೆಯರು, ಅಂಗನವಾಡಿ ಕಾರ್ಯಕರ್ತೆಯರು, ಬಿಸಿಯೂಟ ತಯಾರಿಸುವ ಕಾರ್ಮಿಕರು ಇನ್ನೂ ಮೊದಲಾದವರು ಸೇರಿದ್ದಾರೆ. ಇದಲ್ಲದೆ ಮನೆಗಳಲ್ಲಿಯೇ ಊದಿನಕಡ್ಡಿ ಹೊಸೆಯುವವರು, ಬೀಡಿ ಕಟ್ಟುವವರು, ಹೂ ಕಟ್ಟಿ ಮಾರುವ ಮಹಿಳೆಯರು ಸಾಕಷ್ಟು ಸಂಖ್ಯೆಯಲ್ಲಿದ್ದಾರೆ.

ಇತ್ತೀಚಿನ ದಿನಗಳಲ್ಲಿ ಕರ್ನಾಟಕದ ಹಳ್ಳಿಗಳಲ್ಲಿ ಆರ್ಥಿಕ ಬಿಕ್ಕಟ್ಟು ತೀವ್ರವಾದಂತೆ, ನಗರಗಳಿಗೆ ದುಡಿಯಲು ಬರುವ ಮಹಿಳೆಯರ ಸಂಖ್ಯೆಯೂ ಬಹಳ ಹೆಚ್ಚಾಗಿದೆ.

ಹೀಗೆ ಸಂಘಟಿತ-ಅಸಂಘಟಿತ ಕ್ಷೇತ್ರಗಳೆರಡರಲ್ಲಿಯೂ ದುಡಿಯುವ ಮಹಿಳೆಯರು ಕೆಲಸದ ಸ್ಥಳಗಳಲ್ಲಿ ತೀವ್ರವಾದ ಮಾನಸಿಕ-ದೈಹಿಕ ಕಿರುಕುಳಕ್ಕೆ ಒಳಗಾಗುತ್ತಾರೆ. ಬದುಕಿನ ಅಭದ್ರತೆಯ ಕಾರಣಕ್ಕೆ ಅದನ್ನು ವಿರೋಧಿಸುವುದೂ ಹಲವರಿಗೆ ಸಾಧ್ಯವಿರುವುದಿಲ್ಲ. ಮೂರುತಿಂಗಳ ಹಿಂದಷ್ಟೇ ಬೆಂಗಳೂರಿನ ಗಾರ್ಮೆಂಟ್ ಫ್ಯಾಕ್ಟರಿಗಳಲ್ಲಿ ದುಡಿಯುತ್ತಿದ್ದ ಮೂರು ಯುವತಿಯರ ಆತ್ಮಹತ್ಯೆ ಪ್ರಕರಣಗಳು ಒಂದರ ಮೇಲೊಂದ ರಂತೆ ವರದಿಯಾದವು. ಇವೆಲ್ಲ ಮೇಲಿನವರ ಲೈಂಗಿಕ ಕಿರುಕುಳದಿಂದಲೇ ಎಂಬುದರಲ್ಲಿ ಅನುಮಾನವೇನಿಲ್ಲ. ಕೆಲಸದ ಭದ್ರತೆಯೂ ಇಲ್ಲ. ಯಾವುದೇ ಕಾರ್ಮಿಕ ಸೌಲಭ್ಯಗಳೂ ಇಲ್ಲ. ತಾವು ಗಳಿಸುವ ಹಣಕ್ಕಿಂತ ಮೂರು ಪಟ್ಟು ಹೆಚ್ಚು ಕೆಲಸದ ಒತ್ತಡ ಈ ಕಾರ್ಮಿಕ ಮಹಿಳೆಯರ ಮೇಲಿರುತ್ತದೆ. ಫ್ಯಾಕ್ಟರಿಗಳಲ್ಲಿ ಅಥವಾ ಕೆಲಸದ ಸ್ಥಳದಲ್ಲಿ ಸಂಘಟಿತರಾಗುವ, ಯೂನಿಯನ್ ರಚಿಸಿಕೊಳ್ಳುವ ಅವಕಾಶವಂತೂ ಇರುವುದೇ ಇಲ್ಲ.

ಅಂತಹದರಲ್ಲಿ ಅಂಗನವಾಡಿ, ಬಿಸಿಯೂಟ, ಬೀಡಿ ಮತ್ತು ಗುತ್ತಿಗೆ ಪೌರ ಕಾರ್ಮಿಕರು ಎಷ್ಟೋ ವರ್ಷಗಳಿಂದ ಹೋರಾಡುತ್ತಲೇ ಬಂದಿದ್ದರೂ ಪುಡಿಗಾಸು ಸಂಬಳ ಹೆಚ್ಚಿಸಿದ್ದು ಬಿಟ್ಟರೆ ಅವರ ಕನಿಷ್ಠ ಬೇಡಿಕೆಗಳನ್ನೂ ಸರ್ಕಾರಗಳು ಈಡೇರಿಸಲಿಲ್ಲ. ಅವರು ಇಂದಿಗೂ ಪಟ್ಟು ಬಿಡದೆ ಹೋರಾಟ ಮುಂದುವರಿಸಿಯೇ ಇದ್ದಾರೆ.

ನಗರಗಳಲ್ಲಿ ಮಹಿಳೆಯರ ಸಮಸ್ಯೆಗಳು ಕೆಲಸದ ಸ್ಥಳಗಳಿಗಷ್ಟೇ ಸೀಮಿತ ವಾಗಿರುವುದಿಲ್ಲ. ಹೆಚ್ಚಾಗಿ ಕೊಳಗೇರಿಗಳಲ್ಲಿ ಅಥವಾ ಕೆಳಮಧ್ಯಮ ವರ್ಗದ ಬಡಾವಣೆಗಳಲ್ಲಿ ವಾಸಿಸುವ ಈ ಮಹಿಳೆಯರು ಮೂಲಭೂತ ಸೌಲಭ್ಯಗಳ ಕೊರತೆಯಿಂದಲೂ ಹಲವು ತೊಂದರೆಗಳಿಗೆ ಒಳಗಾಗುತ್ತಾರೆ. ಶೌಚಾಲಯಗಳಿಲ್ಲದ, ನೀರಿಗಾಗಿ ಗಂಟೆಗಟ್ಟಲೆ ಕಾದು ಕಿತ್ತಾಡಬೇಕಾದ ಪರಿಸ್ಥಿತಿ ಮಹಿಳೆಯರ ಮೇಲೆಯೇ ಒತ್ತಡವನ್ನುಂಟು ಮಾಡುತ್ತದೆ. ಇತ್ತೀಚಿನ ಒಂದು ಅಧ್ಯಯನದ ಪ್ರಕಾರ ಕರ್ನಾಟಕದಲ್ಲಿ ಎಲ್ಲಾ ಬಗೆಯ ಮೂಲಭೂತ ಸೌಲಭ್ಯಗಳನ್ನೂ ಹೊಂದಿರುವುದು ಶೇ. 35 ರಷ್ಟು ಮನೆಗಳು ಮಾತ್ರ!! ಹಾಗಾದರೆ ಉಳಿದ ಎಲ್ಲಾ ಮನೆಗಳ ಮಹಿಳೆಯರೂ ಹೊರಗಿನ ದುಡಿಮೆಯಲ್ಲದೆ ಅದೆಷ್ಟು ಹೆಚ್ಚು ಹೊರೆ ಹೊರಬೇಕಾಗಿದೆ?! ಸತತವಾಗಿ ಇಂತಹದ್ದೇ ಸ್ಥಿತಿಯಲ್ಲಿ ಕೆಲವಾರು ವರ್ಷ ದುಡಿಯುವ ಮಹಿಳೆಯರು ಸರಿಪಡಿಸಲಾಗದ ಆರೋಗ್ಯದ ಸಮಸ್ಯೆಗಳಿಗೆ ತುತ್ತಾಗುತ್ತಿರುವುದು ಕಂಡುಬಂದಿದೆ.

ಇದಿಷ್ಟೇ ಅಲ್ಲದೆ, ಕೌಟುಂಬಿಕ ಹಿಂಸೆ ಮತ್ತು ಇತರೆ ದೌರ್ಜನ್ಯಗಳು ದಿನದಿನಕ್ಕೆ ಹೆಚ್ಚುತ್ತಲೇ ಇವೆ. ಈಗೀಗ ರಾತ್ರಿ ಪಾಳಿಗಳಲ್ಲೂ ಹೆಚ್ಚು ಹೆಚ್ಚು ಮಹಿಳೆಯರು ಕೆಲಸ ಮಾಡುತ್ತಿದ್ದು, ಸಾಂಪ್ರದಾಯಿಕವಾದ ಹೆಣ್ಣಿನಪಾತ್ರ ನಿರ್ವಹಿಸುವುದು ಅಸಾಧ್ಯವಾಗಿದೆ. ಆದರೆ ಆರ್ಥಿಕ ಸ್ವಾವಲಂಬನೆ ಕಿರುಕುಳವನ್ನು ವಿರೋಧಿಸುವ ಚೈತನ್ಯ ನೀಡಿದೆ. ಇವೆಲ್ಲವೂ ಸೇರಿ ಉಂಟಾಗಿರುವ ಕೌಟುಂಬಿಕ ತಳಮಳ ಮಹಿಳೆಯ ಮೇಲಿನ ಹಿಂಸೆಯ ರೂಪ ತಾಳುತ್ತಿರುವುದನ್ನು ಕಾಣುತ್ತಿದ್ದೇವೆ. ಕುಟುಂಬದ ಹೊರಗೂ ಹೆಚ್ಚುತ್ತಿರುವ ವಿಕೃತ ಉಪಭೋಗಿ ಸಂಸ್ಕೃತಿಯ ಪರಿಣಾಮವಾಗಿ ಎಳೆಯ ಬಾಲಕಿಯರನ್ನೂ ಬಿಡದೆ ಅತ್ಯಾಚಾರ ನಡೆಸುತ್ತಿರುವುದು, ಕ್ರೂರವಾಗಿ ಆ್ಯಸಿಡ್ ಎರಚುತ್ತಿರುವುದು ಆಘಾತಕಾರಿಯಾಗಿ ಹೆಚ್ಚುತ್ತಿದೆ. ಹಳ್ಳಿಗಳಿಂದ ಹೊಟ್ಟೆಪಾಡಿಗಾಗಿ ನಗರಗಳಿಗೆ ಬರುವ ಅಥವಾ ಸಾಗಾಣಿಕೆಯ ಜಾಲಗಳ ಮೂಲಕ ಎಳೆದುತಂದ ಹೆಣ್ಣುಮಕ್ಕಳನ್ನು ವೇಶ್ಯಾವೃತ್ತಿಗಿಳಿಸಿ ಶೋಷಿಸುವ ವ್ಯವಸ್ಥಿತವಾದ ತಂಡಗಳು ಬಲಿಷ್ಠವಾಗುತ್ತಿವೆ. ಅವರಿಗೆ ಪೊಲೀಸರು, ರಾಜಕಾರಣಿಗಳು ಹಾಗೂ ಪ್ರಭಾವಿ ವ್ಯಕ್ತಿಗಳ ಕೃಪಾಕಟಾಕ್ಷವೂ ಇರುತ್ತದೆ.

**ರಾಜಕೀಯ ಮತ್ತು ಕರ್ನಾಟಕದ ಮಹಿಳೆಯರು**

ಮುಖ್ಯಧಾರೆಯ ರಾಜಕೀಯದಲ್ಲಿ ಕರ್ನಾಟಕದ ಮಹಿಳೆಯರು ಮೊದಲಿಗಿಂತ ಹೆಚ್ಚು ಪಾಲ್ಗೊಳ್ಳುತ್ತಿರುವುದನ್ನು ಗಮನಿಸಬಹುದು. ಅದರಲ್ಲೂ ಪಂಚಾಯತ್ ರಾಜ್ ತಿದ್ದುಪಡಿಯ ನಂತರ ಕೆಳಹಂತದ ಸ್ಥಾನಗಳಲ್ಲಿ ಮಹಿಳೆಯರ ಪ್ರಾತಿನಿಧ್ಯ ಗಮನಾರ್ಹವಾಗಿ ಹೆಚ್ಚಾಗಿದೆ. ಕರ್ನಾಟಕದ ಒಟ್ಟು ಗ್ರಾಮ ಪಂಚಾಯತ್ ಸ್ಥಾನಗಳಲ್ಲಿ 35922, ತಾಲ್ಲೂಕ್ ಪಂಚಾಯತ್‌ನಲ್ಲಿ 1375 ಹಾಗೂ ಜಿಲ್ಲಾ ಪಂಚಾಯತ್‌ನಲ್ಲಿ 339 ಸ್ಥಾನಗಳು ಮಹಿಳೆಯರಿಗೆ ಮೀಸಲಾಗಿವೆ. ಆದರೆ ಇದರರ್ಥ ಚುನಾವಣೆ ರಾಜಕೀಯ ಪಕ್ಷಗಳು ಮಹಿಳೆಯರ ಕಷ್ಟಗಳಿಗೆ ಸ್ಪಂದಿಸುತ್ತಿವೆಯೆಂದಾಗಲೀ ಅಥವಾ ಮಹಿಳೆಯರ ಬೇಡಿಕೆಗಳೊಂದಿಗೆ ಸಹಮತ ಹೊಂದಿವೆಯೆಂದಾಗಲೀ ಅಥವಾ ಅವರನ್ನು ನಾಯಕತ್ವದ ಸ್ಥಾನಗಳಿಗೆ ತರುತ್ತಿವೆಯೆಂದಾಗಲೀ ಅಲ್ಲ. ಏಕೆಂದರೆ ಮೇಲಿನ ಹಂತಗಳಿಗೆ ಹೋದಂತೆ ಮಹಿಳೆಯರ ಪ್ರಾತಿನಿಧ್ಯ ಮುಖಕ್ಕೆ ರಾಚುವಂತೆ ಕಡಿಮೆಯಾಗುತ್ತದೆ. ಹಿಂದಿನ ಸಾರ್ವತ್ರಿಕ ಚುನಾವಣೆಗಳಲ್ಲಿ ರಾಜ್ಯದಿಂದ ವಿಧಾನಸಭೆಗೆ

ಆಯ್ಕೆಯಾದ 223 ಜನರಲ್ಲಿ ಕೇವಲ 6 ಮಂದಿ ಮಹಿಳೆಯರು. ಹಾಗೆಯೇ ವಿಧಾನ ಪರಿಷತ್ತಿಗೆ ಆಯ್ಕೆಯಾದ 72ರಲ್ಲಿ 8 ಮಂದಿ ಮಾತ್ರ ಮಹಿಳೆಯರು!! ಇಂದಿಗೂ ರಾಜಕಾರಣಿಗಳು ಪುರುಷಾಧಿಪತ್ಯದ ಪೂರ್ವಾಗ್ರಹದಿಂದಲೇ ಮಹಿಳೆಯರನ್ನು ಪರಿಗಣಿಸುತ್ತಿದ್ದಾರೆ.

ಆದ್ದರಿಂದಲೇ ಮಹಿಳಾ ಮೀಸಲಾತಿಯ ಕುರಿತು ಚರ್ಚೆ ನಡೆದಾಗ ಎಡಪಕ್ಷಗಳನ್ನು ಬಿಟ್ಟರೆ ಉಳಿದೆಲ್ಲರೂ ಅದನ್ನು ಮೊದಲ ಹಂತದಲ್ಲಿ ವಿರೋಧಿಸಿದವರೆ! ಜನಸಂಖ್ಯಾಧಾರಿತವಾಗಿ ನೀಡಬೇಕಾಗಿದ್ದ ಮೀಸಲಾತಿ ಕೊನೆಗೆ 33%ಕ್ಕೆ ಇಳಿಯಿತು. ಆದರೆ ಅದನ್ನು ಜಾರಿಗೊಳಿಸುವುದಕ್ಕೂ ರಾಜಕೀಯ ಪಕ್ಷಗಳಲ್ಲಿ ಯಾವುದೇ ಯೋಜನೆಗಳಿಲ್ಲ. ಹಿಂದಿನ ಸಾರ್ವತ್ರಿಕ ಚುನಾವಣೆಯಲ್ಲಿ ಎಲ್ಲಾ ರಾಷ್ಟ್ರೀಯ ಪಕ್ಷಗಳೂ ಮಹಿಳೆಯರಿಗೆ ನೀಡಿದ್ದ ಸ್ಥಾನ ಒಟ್ಟಾಗಿ ಶೇ. 6ನ್ನೂ ಮುಟ್ಟಿಲ್ಲ!! ಈ ಬಾರಿಯೂ ಮಹಿಳೆಯರಿಗೆ ಟಿಕೆಟ್ ನೀಡುವುದಕ್ಕೆ ಕೊಸರಾಟ ನಡೆಯುತ್ತಿದೆ. ಈ ವಿಚಾರಕ್ಕಾಗಿ ಮಹಿಳಾ ಕಾಂಗ್ರೆಸ್ ಸದಸ್ಯೆಯರು ತಮ್ಮದೇ ಪಕ್ಷದ ವಿರುದ್ಧ ಧರಣಿ ನಡೆಸಿದ್ದೂ ಆಯಿತು.

ಗ್ರಾಮ ಪಂಚಾಯತ್, ತಾಲ್ಲೂಕು ಪಂಚಾಯತ್‌ಗಳಲ್ಲಿ ಮಹಿಳಾ ಮೀಸಲು ಕ್ಷೇತ್ರಗಳು ಹೆಚ್ಚಿರುವುದರಿಂದ ಮಹಿಳೆಯರ ಭಾಗವಹಿಸುವಿಕೆ ಹೆಚ್ಚಾಗಿರಬಹುದು, ಆದರೆ ಶೇ. 50 ರಷ್ಟು ಮಹಿಳೆಯರನ್ನು ಅವರ ಕುಟುಂಬದ ಗಂಡಸು ಚುನಾವಣೆಗೆ ನಿಲ್ಲಿಸಿ, ಆಕೆ ಗೆದ್ದರೆ ತಾವು ಆಳ್ವಿಕೆ ನಡೆಸುತ್ತಾರೆಂಬುದು ಬಹಿರಂಗ ಸತ್ಯ. ಉಳಿದ ಅರ್ಧದಷ್ಟು ಮಹಿಳಾ ಪ್ರತಿನಿಧಿಗಳಿಗೆ ತಮ್ಮ ಸಾಮರ್ಥ್ಯ ಪ್ರದರ್ಶಿಸುವ ಹುಮ್ಮಸ್ಸಿದ್ದರೂ, ಅದಕ್ಕೆ ಬೇಕಾದ ತರಬೇತಿ ಮತ್ತು ತಯಾರಿಯ ಕೊರತೆಯಿರುತ್ತದೆ. ಅಥವಾ ಪಂಚಾಯಿತಿಯ ಉಳಿದ ಪುರುಷ ಸದಸ್ಯರಿಂದ ತೀವ್ರವಾದ ವಿರೋಧ ಎದುರಿಸಬೇಕಾಗುತ್ತದೆ. ದಲಿತ ಮಹಿಳೆಯರಾದರಂತೂ ಇನ್ನೂ ಕಷ್ಟ. ಎಷ್ಟೋ ಪ್ರಕರಣಗಳಲ್ಲಿ ಬಲಿಷ್ಠ ಪುರುಷ ಸದಸ್ಯರ ಆಜ್ಞೆಯನ್ನು ವಿರೋಧಿಸಿ ಪ್ರಾಮಾಣಿಕವಾಗಿ ಸೇವೆ ಸಲ್ಲಿಸುತ್ತಿದ್ದ ದಲಿತ ಮಹಿಳಾ ಅಧ್ಯಕ್ಷರುಗಳನ್ನು ಸಾರಾಸಗಟಾಗಿ ಕೊಲೆಮಾಡಿ ಪಾರಾಗಿರುವುದುಂಟು. ಇವೆಲ್ಲವೂ ಈಗಲೂ ಮಹಿಳಾ ಪ್ರತಿನಿಧಿಗಳ ಮುಂದಿರುವ ಸವಾಲುಗಳಾಗಿವೆ.

ಇನ್ನು ರಾಜಕೀಯ ಪಕ್ಷಗಳ ಪ್ರಣಾಳಿಕೆಯಲ್ಲಿ ಹುಡುಕಿದರೂ ನಿಜವಾಗಿ ಮಹಿಳೆಯರಿಗೆ ಉಪಯುಕ್ತವಾದ ಯೋಜನೆಗಳು ಸಿಗುವುದಿಲ್ಲ. ಸಿಕ್ಕರೂ ತುಂಬಾ ಮೇಲ್ಮಟ್ಟದ. ನಿಜವಾದ ಸಮಸ್ಯೆಯನ್ನು ಮುಟ್ಟದ ಕೆಲವು ಪ್ರಸ್ತಾಪಗಳಿರುತ್ತವೆ. ಅವು ಜಾರಿಗೆ ಬರುವುದಂತೂ ಇಲ್ಲವೇ ಇಲ್ಲ. ಪಕ್ಷಗಳ ಮುಂಚೂಣಿ ನಾಯಕರಾಗಿದ್ದುಕೊಂಡು ಮಹಿಳೆಯರ ಮೇಲೆ ಅಮಾನುಷವಾದ ಕ್ರೌರ್ಯವೆಸಗಿ, ಅದು ಬಹಿರಂಗಗೊಂಡಾಗಲೂ ಅಂಥವರ ಮೇಲೆ ಶಿಸ್ತುಕ್ರಮ ಕೈಗೊಂಡ ಉದಾಹರಣೆ ಬಹಳ ಕಡಿಮೆ (ಕೇರಳದ ಸೂರ್ಯನೆಲ್ಲಿ ಪ್ರಕರಣ, ಸುಶೀಲ್‌ಶರ್ಮಾನ ತಂದೂರಿ ಪ್ರಕರಣ, ರೇಣುಕಾರಾಧ್ಯನ ಅತ್ಯಾಚಾರದ ಪ್ರಕರಣ ಹೀಗೆ ಉದ್ದನೆಯ ಪಟ್ಟಿ).

ಇನ್ನು ಬಿಜೆಪಿ ಪಕ್ಷವಂತೂ ತನ್ನ ಮೂಲ ಸಿದ್ಧಾಂತದಲ್ಲೇ ಮಹಿಳೆಯರನ್ನು ಪುರೋಹಿತಶಾಹಿ ಮೌಢ್ಯಕ್ಕೆ ಕಟ್ಟಿಹಾಕಬಯಸುವ, ಅವರ ಬಿಡುಗಡೆಯ ಎಲ್ಲ ಪ್ರಯತ್ನಗಳನ್ನೂ ತೀವ್ರವಾಗಿ ವಿರೋಧಿಸುವ ಪಕ್ಷವಾಗಿದೆ. ಅವರ ಪ್ರಕಾರ ಮಹಿಳೆಯರು 'ಒಳ್ಳೆಯ ಹೆಂಡತಿ, ತಾಯಿ, ಸೇವಕಿ' ಇತ್ಯಾದಿಯಾಗಿದ್ದರೆ ಸಾಕು. ಇದು ಬಿಜೆಪಿಯ ಮಾತೃಸಂಸ್ಥೆಯಾದ ಆರೆಸ್ಸೆಸ್‌ನ ಮುಖಂಡ ಡಾ. ಸುದರ್ಶನ್‌ರ ಮಾತುಗಳು. ಅವರ ಮಹಿಳಾ ಘಟಕದ ಸಂಚಾಲಕಿ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ. 'ಹೆಂಗಸರನ್ನು ನಿಯಂತ್ರಣದಲ್ಲಿಡಲು ಆಗಾಗ ಹೊಡೆಯುವುದರಲ್ಲಿ ತಪ್ಪೇನಿಲ್ಲ' ಎನ್ನುತ್ತಾರೆ. ರಾಜಸ್ಥಾನದ ಬನ್ವಾರಿದೇವಿ ಪ್ರಕರಣದಲ್ಲಿ ಅತ್ಯಾಚಾರಿಗಳಾದ ಮೇಲ್ಜಾತಿ ಭೂಮಾಲಿಕರನ್ನು ಬಿಜೆಪಿ ಸನ್ಮಾನಿಸಿತ್ತು! 2002ರಲ್ಲಿ ಗುಜರಾತ್‌ನಲ್ಲಿ ಅಲ್ಪಸಂಖ್ಯಾತ ಮಹಿಳೆಯರ ಮೇಲೆ ನಡೆದ ಹಿಂಸಾಚಾರಕ್ಕೆ ನೇರವಾಗಿ ಬಿಜೆಪಿಯೇ ಹೊಣೆ. ಕರ್ನಾಟಕದಲ್ಲಿಯೇ ಉಡುಪಿಯ ಬಿಸಿಯೂಟ ಕಾರ್ಮಿಕರಾದ ದಲಿತ ಮಹಿಳೆಯೊಬ್ಬರನ್ನು ಜಾತಿಯ ಕಾರಣಕ್ಕಾಗಿ ಕಿರುಕುಳ ನೀಡಿ ಬಹಿಷ್ಕಾರ ಹಾಕಲು ಹೊರಟಿದ್ದವರು ಬಿಜೆಪಿ ಬೆಂಬಲಿತ ಭಜರಂಗದಳದ ಗೂಂಡಾಗಳು. ಆ ಅರ್ಥದಲ್ಲಿ ಬಿಜೆಪಿ ಅಪ್ಪಟ ಮಹಿಳಾ ವಿರೋಧಿ ಪಕ್ಷ.

ಕಳೆದ 2–3 ವರ್ಷಗಳಿಂದ ಜೆಂಡರ್ ಬಜೆಟಿಂಗ್ ಎಂದು ಕೇಂದ್ರ ಬಜೆಟ್‌ನಲ್ಲಿ ಮಹಿಳೆಯರಿಗೆ ಮಹಿಳಾ ಮತ್ತು ಮಕ್ಕಳ ಇಲಾಖೆಯಿಂದಾಚೆಗೂ ಹಣ ಮೀಸಲಿರಿಸಿ ಕಾಂಗ್ರೆಸ್ ಮಹಿಳೋದ್ಧಾರಕನಂತೆ ಬೀಗುತ್ತಿದೆ. ಆ ಪರಿಕಲ್ಪನೆ ಹಿಂದಿಗಿಂತ ಬಹಳ ಉತ್ತಮ, ಆದರೆ ಅದರ ಮೂಲ ಕಾಂಗ್ರೆಸ್ ಅಲ್ಲ, ವಿಶ್ವಸಂಸ್ಥೆ! ಮತ್ತು ಅಷ್ಟಾದ ಮೇಲೂ ಒಟ್ಟಾರೆ ಬಜೆಟ್‌ನಲ್ಲಿ ಮಹಿಳೆಯರ ಪಾಲು ಕೇವಲ 4.8%. ಕರ್ನಾಟಕದಲ್ಲೂ ಕಳೆದ ವರ್ಷದಿಂದ ಜೆಂಡರ್ ಬಜೆಟಿಂಗ್ ಮಾಡಲಾಗುತ್ತಿದ್ದರೂ ಇದು ಶೇ. 7ನ್ನು ಯಾವಾಗಲೂ ದಾಟಿಲ್ಲ. ಮತ್ತು ಪ್ರತೀವರ್ಷವೂ ಬಹಳಷ್ಟು ಹಣ ಸರಿಯಾಗಿ ಬಳಕೆಯಾಗದೆ ಹೋಗುತ್ತಿದೆ.

ಈ ಎಲ್ಲಾ ಅಂಶಗಳೂ ರಾಜಕೀಯ ಪಕ್ಷಗಳ ನೇರ ಮತ್ತು ಪರೋಕ್ಷ ಮಹಿಳಾ ವಿರೋಧಿತನವನ್ನು ತೋರುತ್ತಿವೆ. ಆದ್ದರಿಂದ ಚುನಾವಣೆಗಳ ಸಂದರ್ಭದಲ್ಲಾದರೂ ಪ್ರಜೆಗಳೆದುರು ಬರುವ ಇವರುಗಳನ್ನು ಮಹಿಳೆಯರು ಪ್ರಜ್ಞಾಪೂರ್ವಕವಾಗಿ ಪ್ರಶ್ನಿಸಬೇಕಾದ ಅಗತ್ಯವಿದೆ. ಕೇವಲ ರಾಜಕಾರಣಿಗಳ ವೋಟ್‌ಬ್ಯಾಂಕ್‌ಗಳಾಗಿ ಮಾತ್ರ ಅವರುಗಳು ಬಳಸುತ್ತಿರುವ ಮಹಿಳಾ ಸಮುದಾಯ ತಮ್ಮ ರಾಜಕೀಯ ಹಕ್ಕುಗಳನ್ನೂ, ದಿನನಿತ್ಯದ ಅಗತ್ಯಗಳನ್ನೂ ಆಗ್ರಹಿಸುವುದು ಅತ್ಯಗತ್ಯವಾದುದು. ಇದಕ್ಕಾಗಿ ನಮ್ಮ ನೇರವಾದ ಹಕ್ಕೊತ್ತಾಯಗಳನ್ನು ಮುಂದಿಡಬೇಕಾಗಿದೆ.

### ನಮ್ಮ ಹಕ್ಕೊತ್ತಾಯಗಳು:

- ಮಹಿಳೆಯರ ರಾಜಕೀಯ ಹಕ್ಕುಗಳನ್ನು ಖಾತ್ರಿಗೊಳಿಸಬೇಕು. ಪ್ರಜಾತಂತ್ರದ ಯಂತ್ರಾಂಗದಲ್ಲಿ ಮಹಿಳೆಯರ ಭಾಗವಹಿಸುವಿಕೆ ಹೆಚ್ಚಾಗಬೇಕು. ಅವರನ್ನು ಕೇವಲ ಫಲಾನುಭವಿಗಳನ್ನಾಗಿಸುವ ಬದಲು, ಯೋಜನೆಗಳ ರಚನೆಯಲ್ಲಿ, ಕಾನೂನುಗಳ ರಚನೆಯಲ್ಲಿ ಮತ್ತು ತೀರ್ಮಾನ ಕೈಗೊಳ್ಳುವ ಪ್ರಕ್ರಿಯೆಯಲ್ಲಿ ಮಹಿಳೆಯರ ಪ್ರಾತಿನಿಧ್ಯ ಸಾಕಷ್ಟಿರುವಂತೆ ನೋಡಿಕೊಳ್ಳಬೇಕು.
- ಸರ್ಕಾರದ ಯಾವುದೇ ಕಾರ್ಯಕ್ರಮ ಅಥವಾ ಯೋಜನೆಯ ಕುರಿತು ಮಾಹಿತಿ ಪಡೆಯುವ ಹಕ್ಕು ಮಹಿಳೆಯರಿಗೂ ಇದೆ. ಮಹಿಳೆಯರಿಗೆ ಹಾಗೂ ಜನತೆಗೆ ಸಂಬಂಧಿಸಿದ ಯಾವುದೇ ಯೋಜನೆಯ ರಚನೆಯಲ್ಲಿ ಭಾಗವಹಿಸುವ, ಪರಿವೀಕ್ಷಣೆ ನಡೆಸುವ ಹಾಗೂ ತಮಗೆ ಹಾನಿಕಾರಕವೆಂದು ಕಂಡಾಗ ತಡೆಯುವ ಅಧಿಕಾರ ಮಹಿಳೆಯರಿಗೆ ಹಾಗೂ ಮಹಿಳಾ ಸಂಘಟನೆಗಳಿಗಿರಬೇಕು.
- ಮಹಿಳಾ ಮೀಸಲಾತಿ ಎಲ್ಲಾ ಕ್ಷೇತ್ರಗಳಲ್ಲೂ ಜಾರಿಗೆ ಬರಬೇಕು. ವೈಜ್ಞಾನಿಕವಾಗಿ ಮೀಸಲಾತಿಯನ್ನು ಜನಸಂಖ್ಯಾಧರಿತವಾಗಿ ನೀಡಬೇಕು. ಆದರೆ ತಕ್ಷಣಕ್ಕೆ ಸರ್ಕಾರಗಳು ಒಪ್ಪಿಕೊಂಡಿರುವ 33% ಆದರೂ ಉದ್ಯೋಗ, ಶಿಕ್ಷಣ ಜಾರಿಯಾಗಬೇಕು.

* ವಾರ್ಷಿಕ ಬಜೆಟ್‌ನಲ್ಲಿ ಎಲ್ಲಾ ಇಲಾಖೆಗಳಲ್ಲೂ ಮತ್ತು ಪಂಚಾಯತಿ ಮಟ್ಟದಲ್ಲೂ ಶೇ. 10 ರಷ್ಟು ಹಣವನ್ನು ಮಹಿಳೆಯರಿಗೆ ಸಂಬಂಧಿಸಿದ ಯೋಜನೆಗಳಿಗಾಗಿ ಮೀಸಲಿರಿಸಬೇಕು. ಮಹಿಳಾ ಅಭಿವೃದ್ಧಿ ಇಲಾಖೆಯಂತಹ ಪ್ರತ್ಯೇಕ ಇಲಾಖೆಗಳಿಗೂ ('ಎ' ವಿಭಾಗದ ಇಲಾಖೆಗಳು) ಈಗ ನೀಡಲಾಗುತ್ತಿರುವ ಶೇಕಡಾವಾರು ಅನುದಾನವನ್ನು ಹೆಚ್ಚಿಸಬೇಕು. ಎಲ್ಲಕ್ಕಿಂತ ಮುಖ್ಯವಾಗಿ ಈ ಹಣ ಸಂಪೂರ್ಣವಾಗಿ ವಿನಿಯೋಗವಾಗುವುದನ್ನು ಖಾತ್ರಿಗೊಳಿಸಬೇಕು.
* ಮಹಿಳೆಯರ ಸರ್ವಾಂಗೀಣ ಅಭಿವೃದ್ಧಿಗಾಗಿ ವಿಶೇಷವಾಗಿ ರಚಿತವಾದ ಮಹಿಳಾ ಆಯೋಗವನ್ನು ಸಶಕ್ತಗೊಳಿಸಬೇಕು. ಈ ಪ್ರಕ್ರಿಯೆಯಲ್ಲಿ ಮಹಿಳಾ ಸಂಘಟನೆಗಳನ್ನು ಹಾಗೂ ಕಾರ್ಯಕರ್ತರನ್ನು ಒಳಗೊಳ್ಳಬೇಕು. ಇದ್ದೂ ಇಲ್ಲದಂತಿರುವ ಬದಲು ಅದಕ್ಕೆ ಅಗತ್ಯವಾದ ಅಧಿಕಾರಗಳನ್ನು, ಹಣಕಾಸನ್ನು ಹಾಗೂ ಸಿಬ್ಬಂದಿಯನ್ನು ಒದಗಿಸಬೇಕು. ಜಿಲ್ಲಾ ಮಟ್ಟದಲ್ಲೂ ಆಯೋಗದ ಸರಿಯಾದ ಕಾರ್ಯನಿರ್ವಹಣೆಯನ್ನು ಖಾತ್ರಿಗೊಳಿಸಬೇಕು.
* ಗ್ರಾಮೀಣ ಮತ್ತು ನಗರ ಪ್ರದೇಶಗಳೆರಡರಲ್ಲೂ ಅಸಂಘಟಿತ ಮಹಿಳಾ ಕಾರ್ಮಿಕರ ಕ್ಷೇಮಾಭಿವೃದ್ಧಿಗಾಗಿ ನೀತಿಯೊಂದನ್ನು ಆಯಾ ಸಮುದಾಯದ ಹಾಗೂ ಮಹಿಳಾ ಸಂಘಟನೆಗಳ ಪಾಲ್ಗೊಳ್ಳುವಿಕೆಯೊಂದಿಗೆ ರೂಪಿಸಬೇಕು. ಕೆಲಸದ ಸ್ಥಳದಲ್ಲಿ ಕಿರುಕುಳ ಮುಕ್ತವಾದ ವಾತಾವರಣ, ಕೆಲಸದ ಭದ್ರತೆ, ಹಾಗೂ ಕನಿಷ್ಟ ಕೂಲಿ ಕಾಯ್ದೆಗನುಗುಣವಾಗಿ ಆಯಾ ಕ್ಷೇತ್ರಗಳಿಗೆ ಸಲ್ಲಬೇಕಾದ ವೇತನ ನೀಡಬೇಕು (ಕೃಷಿ ಕೂಲಿ ಕಾರ್ಮಿಕರು, ಮನೆಕೆಲಸದ ಮಹಿಳೆಯರು, ಪೌರ ಕಾರ್ಮಿಕರು, ಗಾರ್ಮೆಂಟ್ಸ್ ಕಾರ್ಮಿಕರು, ಅಂಗನವಾಡಿ ಕಾರ್ಯಕರ್ತೆಯರು ಮೊದಲಾದ ಎಲ್ಲಾ ಕ್ಷೇತ್ರಗಳಲ್ಲೂ).
* ಸಮಾನ ಕೆಲಸಕ್ಕೆ ಸಮಾನ ವೇತನವನ್ನೂ ಮಹಿಳೆಯರು ದುಡಿಯುವ ಎಲ್ಲಾ ಕ್ಷೇತ್ರಗಳಲ್ಲೂ ಕಡ್ಡಾಯವಾಗಿ ಜಾರಿಯಾಗುವಂತೆ ಕಾರ್ಯಕ್ರಮಗಳನ್ನು ರೂಪಿಸಬೇಕು.
* ಮಹಿಳೆಯರು ದಶಕಗಟ್ಟಲೆ ಹೋರಾಡಿ ಜಾರಿಯಾಗುವಂತೆ ಮಾಡಿದ ಮಹಿಳಾ ಪರ ಕಾನುಗಳು ಕಾರ್ಯಗತವಾಗಬೇಕು. ಈ ವಿಚಾರದಲ್ಲಿ ಮೊದಲು ಸರ್ಕಾರಿ ಯಂತ್ರಾಂಗವನ್ನು ಸಂವೇದನಾಶೀಲಗೊಳಿಸಬೇಕು. ಅದಕ್ಕಾಗಿ ಅಗತ್ಯವಾದ ಸಂರಚನೆಗಳನ್ನು ರೂಪಿಸಬೇಕು ಹಾಗೂ ಅಗತ್ಯ ಹಣಕಾಸನ್ನು ಬಿಡುಗಡೆ ಮಾಡಬೇಕು. ಇಂತಹ ಕ್ರಿಯಾಶೀಲತೆಯ ಕೊರತೆಯಿಂದಲೇ 'ಕೆಲಸದ ಸ್ಥಳದಲ್ಲಿ ಕಿರುಕುಳ ತಡೆ ಕಾಯ್ದೆ', 'ಕೌಟುಂಬಿಕ ಹಿಂಸೆ ತಡೆ ಕಾಯ್ದೆ' ಮೊದಲಾದ ಉತ್ತಮ ಕಾನೂನುಗಳು ಜಾರಿಯಾಗುತ್ತಿಲ್ಲ.
* ಮಹಿಳೆಯರ ಶಿಕ್ಷಣಕ್ಕಾಗಿ ಯಾವುದೇ ಯೋಜನೆಗಳು ಇದುವರೆಗೂ ಇಲ್ಲ. ಶಿಕ್ಷಣ ಇಲಾಖೆಯಲ್ಲಿ ಲಿಂಗಾಧರಿತ ಬಜೆಟ್‌ನ ನಂತರವೂ ನಿರ್ದಿಷ್ಟ ಯೋಜನೆಯಾಗಲೀ, ಮೀಸಲು ಹಣವಾಗಲೀ ಇದಕ್ಕಾಗಿ ಇಲ್ಲ. ಮಹಿಳೆಯರ ಶಿಕ್ಷಣಕ್ಕೆ ಆದ್ಯತೆಯ ಮೇಲೆ ಗಮನ ನೀಡಬೇಕು.
* ಕರ್ನಾಟಕದ ಶೇ.50 ಮಹಿಳೆಯರು ರಕ್ತಹೀನತೆ ಹಾಗೂ ಗರ್ಭಧಾರಣೆಗೆ ಸಂಬಂಧಿಸಿದ ಸಮಸ್ಯೆಗಳಿಂದ ನರಳುತ್ತಿದ್ದಾರೆ. ಗ್ರಾಮೀಣ ಪ್ರದೇಶಗಳಲ್ಲಿ ಪರಿಸ್ಥಿತಿ ಇನ್ನಷ್ಟು ಶೋಚನೀಯವಾಗಿದೆ. ಒಟ್ಟಾರೆ ಅರೋಗ್ಯಕ್ಕಾಗಿ ಬಜೆಟ್‌ನಲ್ಲಿರುವ ಹಣ ಶೇ.3.35 ಮಾತ್ರ. ಮಹಿಳೆಯರ ಆರೋಗ್ಯವಂತೂ ಅತ್ಯಂತ ನಿರ್ಲಕ್ಷಿಸಲ್ಪಟ್ಟಿದೆ. ಆದ್ದರಿಂದ ಮಹಿಳೆಯರ ಜನನ ಸಂಬಂಧಿ ಆರೋಗ್ಯ ಹಾಗೂ ಮಕ್ಕಳ ಆರೋಗ್ಯಕ್ಕೆ ವಿಶೇಷ ನೀತಿ ಮತ್ತು ಅನುದಾನ ನೀಡಬೇಕು.
* ದಲಿತ ಮಹಿಳೆಯರು ಹಾಗೂ ಅಲ್ಪಸಂಖ್ಯಾತ ಮಹಿಳೆಯರು ಜಾತಿ ಮತ್ತು ಧರ್ಮಾಧರಿತವಾದ ಹಲವಾರು ಸಮಸ್ಯೆಗಳಿಗೆ ಹಾಗೂ ದೌರ್ಜನ್ಯಗಳಿಗೆ ಈಡಾಗುತ್ತಿದ್ದಾರೆ. ದಲಿತ ಮಹಿಳೆಯರು ಜಾತಿ ಮತ್ತು ಲಿಂಗಾಧರಿತವಾದ ಇಬ್ಬಗೆಯ ತಾರತಮ್ಯಗಳನ್ನು ಎಲ್ಲಾ ಕ್ಷೇತ್ರಗಳಲ್ಲೂ ಎದುರಿಸಬೇಕಾಗಿದೆ. ಇದನ್ನು ತಡೆಯಲು ವಿಶೇಷ ಮೀಸಲಾತಿ ಮತ್ತು ಪರಿಣಾಮಕಾರಿ ನೀತಿಗಳನ್ನು ರೂಪಿಸಬೇಕು.
* ವೇಶ್ಯೆಯರನ್ನು ಅಪರಾಧಿಗಳಂತೆ ಪರಿಗಣಿಸುವ ಪೊಲೀಸರ ಮತ್ತು ನ್ಯಾಯಾಂಗದ ಧೋರಣೆಯಲ್ಲಿ ತೀವ್ರವಾದ ಬದಲಾವಣೆ ಬರಬೇಕಿದೆ. ಹಲವು ಬಗೆಯಲ್ಲಿ ಶೋಷಣೆಗೊಳಗಾಗುತ್ತಿರುವ ಅವರ ನೆರವಿಗೆ ಯೋಜನೆ ರೂಪಿಸಬೇಕು ಹಾಗೂ ಅವರ ನಾಗರಿಕ ಹಕ್ಕುಗಳನ್ನು ಗೌರವಿಸಬೇಕು.
* ದುಡಿಯುವ ಮಹಿಳೆಯರ ಸ್ಥಿತಿಯನ್ನು ನಿಜವಾಗಿ ಉತ್ತಮಪಡಿಸಬೇಕಾದರೆ ಅವರು ವಾಸಿಸುವ ಸ್ಥಳಗಳಲ್ಲಿ ಮೂಲಭೂತ ಸೌಲಭ್ಯಗಳ ಕೊರತೆಯನ್ನು ಸರಿಪಡಿಸಬೇಕು. ಸರ್ಕಾರ ತನ್ನ ಈ ಜವಾಬ್ದಾರಿಯಿಂದ ಹಿಂದೆ ಸರಿಯುವುದನ್ನು ನಿಲ್ಲಿಸಿ, ಸಾಮಾಜಿಕ ಸಂಘಟನೆಗಳನ್ನೊಳಗೊಂಡು ಇದಕ್ಕಾಗಿ ಯೋಜನೆ ರೂಪಿಸಬೇಕು.
* ಸಾರ್ವಜನಿಕ ವಿತರಣಾ ವ್ಯವಸ್ಥೆಯು ಸಾಮಾಜಿಕ ನ್ಯಾಯದ ದೃಷ್ಟಿಯಿಂದ ಮುಖ್ಯವಾದುದಾದ್ದರಿಂದ ಅದನ್ನು ಬಲಪಡಿಸಬೇಕು. ಅದರಲ್ಲಿನ ಅವ್ಯವಹಾರವನ್ನು ತಪ್ಪಿಸಬೇಕು ಹಾಗೂ ಪಡಿತರ ಚೀಟಿಯ ವಿತರಣೆಯನ್ನು ಸರಿಪಡಿಸಬೇಕು.
* ಸ್ತ್ರೀಶಕ್ತಿ ಸಂಘಗಳನ್ನು ರಾಜಕೀಯ ಬಾಲಂಗೋಚಿಗಳಂತೆ, ಸರ್ಕಾರಿ ಕಾರ್ಯಕ್ರಮಗಳಿಗೆ ಅಥವಾ ರಾಜಕಾರಣಿಗಳ ಪ್ರಚಾರಗಳಿಗೆ ಕಡ್ಡಾಯ ಪ್ರೇಕ್ಷಕರಂತೆ ಬಳಸುವುದನ್ನು ಕೂಡಲೇ ತಪ್ಪಿಸಲು ಕಠಿಣ ಕ್ರಮ ಕೈಗೊಳ್ಳಬೇಕು.
* ಸಾರಾಯಿ ನಿಷೇಧ ಮಾತ್ರವಲ್ಲ, ಮಹಿಳೆಯರ ಬಹುಕಾಲದ ಬೇಡಿಕೆಯಾದ ಸಂಪೂರ್ಣ ಮದ್ಯ ಪಾನ ನಿಷೇಧವನ್ನು ಜಾರಿ ಮಾಡಬೇಕು.
* ಗ್ರಾಮಿಣ ಪ್ರದೇಶದಲ್ಲಿ ವಿಶೇಷ ಆರ್ಥಿಕ ವಲಯದ ಯೋಜನೆಯಿಂದಾಗಿ ಹಾಗೂ ನಗರ ಪ್ರದೇಶದ ಕೊಳಗೇರಿಗಳಲ್ಲಿ ವಾಸಿಸುವ ಮಹಿಳೆಯರು ಎದುರಿಸುವ ಸ್ಥಳಾಂತರ ಸಮಸ್ಯೆ ಮಹಿಳೆಯರ ಮೇಲೆ ಹೆಚ್ಚಿನ ಹೊರೆಯನ್ನು ಹಾಕುತ್ತಿದೆ. ಇಂಥ ಸಮಸ್ಯೆಗಳ ಶೀಘ್ರ ಪರಿಹಾರಕ್ಕೆ ಯೋಜನೆಗಳಾಗಬೇಕು.

❑

## ಲತೆ

ಲತೆ ಆಗಲಾರೆ ನಾ
ವೃಕ್ಷವ ಹುಡುಕುತ್ತಾ ಅಲೆದಾಡಲಾರೆ
ನಾ ಹೆಮ್ಮರವಾಗಿ ಬೆಳೆದು
ಎಲ್ಲೆಡೆ ತಂಪು ಹರಿಸ ಬಯಸುವೆ
ಹೆಣ್ಣೆಂಬ ಮಾತ್ರಕ್ಕೆ
ಹಲವು ಮುಖವಾಡ ಧರಿಸಿ
ಅಗ್ನಿಯೊಳದೂಡುವ ಕೈಗೆ
ಎಟುಕಲಾರೆ ನಾ
ಲತೆ ಆಗಲಾರೆ ನಾ

–ಶೋಭಾ ಕುಲಕರ್ಣಿ

# ಪ್ರಶಸ್ತಿ ನಿರಾಕರಣೆ ಒಂದು ಸ್ಪಷ್ಟನೆ

• ನಮ್ಮ ಮಾನಸ

'ಪಾಪ್ಯುಲೇಷನ್ ಫಸ್ಟ್' ಒಂದು ಸರ್ಕಾರೇತರ ಸಂಸ್ಥೆ. ಯುನೈಟೆಡ್ ನೇಷನ್ಸ್‌ನ ಹಣದ ನೆರವಿನಿಂದ ನಡೆಯುವ ಈ ಸಂಸ್ಥೆ ಮುಂಬಯಿಯಲ್ಲಿ ಇದೆ. ಮಹಿಳೆಯ ಹಕ್ಕುಗಳು ಹಾಗೂ ಸಾಮಾಜಿಕ ಅಭಿವೃದ್ಧಿಯ ಒಂದು ಚೌಕಟ್ಟಿನೊಳಗೆ ತಾವು ಜನಸಂಖ್ಯೆ ಹಾಗೂ ಆರೋಗ್ಯಕ್ಕೆ ಸಂಬಂಧಿಸಿದಂತೆ ಕೆಲಸ ಮಾಡುವುದಾಗಿ ಇವರು ಹೇಳುತ್ತಾರೆ. ಪ್ರತಿ ವರ್ಷ ಮಾಧ್ಯಮದಲ್ಲಿ ಲಿಂಗಸೂಕ್ಷ್ಮತೆಗಾಗಿ ಕೆಲಸ ಮಾಡಿದ ಮಹಿಳೆ, ಸಂಸ್ಥೆಗೆ ಇವರು UNFPA ಲಾಡ್ಲಿ ಪ್ರಶಸ್ತಿ ನೀಡುತ್ತಾರೆ. 2006-07ರಲ್ಲಿ 'ನಮ್ಮ ಮಾನಸ' ಪತ್ರಿಕೆಗೆ ಈ ಪ್ರಶಸ್ತಿ ನೀಡುವುದಾಗಿ ದೂರವಾಣಿಯ ಮೂಲಕ ನಮ್ಮನ್ನು ಸಂಪರ್ಕಿಸಲಾಯಿತು. ಮಾನಸ ಈ ಸಂಸ್ಥೆಯ ಬಗ್ಗೆ ಮಾಹಿತಿ ಕಲೆ ಹಾಕಿತು. ಅನಂತರದಲ್ಲಿ ಈ ಪ್ರಶಸ್ತಿಯನ್ನು ತೆಗೆದುಕೊಳ್ಳದಿರುವುದಕ್ಕೆ ನಿರ್ಧರಿಸಿತು. ಪ್ರಶಸ್ತಿ ನಿರಾಕರಿಸಲು ಕಾರಣ ವಿವರಿಸಿ ಪಾಪ್ಯುಲೇಷನ್ ಫಸ್ಟ್‌ನವರಿಗೆ ಒಂದು ಪತ್ರ ಕಳಿಸಿತು. ಆ ಪತ್ರ ಹಾಗೂ ಆ ಪತ್ರಕ್ಕೆ ಬಂದ ಪ್ರತಿಕ್ರಿಯೆಗಳನ್ನು ನಾವು ಮಾನಸದಲ್ಲಿ ಪ್ರಕಟಿಸುತ್ತಿದ್ದೇವೆ. ಈ ಹಂತದಲ್ಲಿ ನಮಗೆ ನೆರವಾದ ನೀಲಾಂಜನ ಬಿಸ್ವಾಸ್ ಹಾಗೂ ಲಕ್ಷ್ಮೀಮೂರ್ತಿ ಯವರನ್ನು 'ಮಾನಸ' ಕೃತಜ್ಞತೆಯಿಂದ ನೆನೆಯುತ್ತದೆ.

– ಸಂ.

ಚಾಮುಂಡೇಶ್ವರಿಯವರಿಗೆ,

2006-07ರ ಲಿಂಗಸೂಕ್ಷ್ಮತೆಗಾಗಿ UNFPA ಲಾಡ್ಲಿ ಮಾಧ್ಯಮ ಪ್ರಶಸ್ತಿಗೆ (ದಕ್ಷಿಣ ವಲಯಕ್ಕೆ) 'ನಮ್ಮ ಮಾನಸ' ಪತ್ರಿಕೆಯನ್ನು ಪಾಪ್ಯುಲೇಷನ್ ಫಸ್ಟ್‌ನವರು ಆಯ್ಕೆ ಮಾಡಿದ್ದಾರೆಂದು ತಾವು ದೂರವಾಣಿಯ ಮೂಲಕ ತಿಳಿಸಿದುದಕ್ಕೆ ವಂದನೆಗಳು. ಅನಂತರದಲ್ಲಿ ವೈಯಕ್ತಿಕವಾಗಿ ನಮ್ಮನ್ನು ಸಂಪರ್ಕಿಸುವುದಕ್ಕೆ ನೀವು ತೆಗೆದುಕೊಂಡ ನಿಮ್ಮ ಎಲ್ಲಾ ಪ್ರಯತ್ನಗಳಿಗೆ ಕೂಡಾ ವಂದನೆಗಳು. ಆದರೆ ನಾವು ಈ ಪ್ರಶಸ್ತಿಯನ್ನು ನಿರಾಕರಿಸುತ್ತಿದ್ದೇವೆ ಎಂದು ಹೇಳಲು ವಿಷಾದಿಸುತ್ತೇವೆ. ಹಾಗೂ ಈ ಬಗೆಗಿನ ಕಾರಣಗಳನ್ನು ಈ ಸಂದರ್ಭದಲ್ಲಿ ಹೇಳಲು ಬಯಸುತ್ತೇವೆ.

'ನಮ್ಮ ಮಾನಸ' ನಿಮಗೆ ತಿಳಿದ ಹಾಗೆ ಯಾವುದೇ ಅನುದಾನದ ನೆರವಿಲ್ಲದೇ ನಡೆಯುತ್ತಿರುವ ಮಹಿಳಾ ಪತ್ರಿಕೆ. ಕಳೆದ 23 ವರ್ಷಗಳಿಂದ ಕನ್ನಡದಲ್ಲಿ ಈ ಮಾಸಪತ್ರಿಕೆ ಬರುತ್ತಿದೆ. ಭಾರತದ ಸ್ವಾಯತ್ತ ಚಳವಳಿಯ ಭಾಗವಾಗಿರುವ ನಾವು ವಿದೇಶೀ ಅನುದಾನದ ರಾಜಕೀಯದ ಬಗ್ಗೆ ಒಂದು ಬಲವಾದ ಟೀಕೆ/ವಿಮರ್ಶೆಯನ್ನು ಹೊಂದಿದ್ದೇವೆ. ನಮ್ಮ ಅನುಭವದಲ್ಲಿ ವಿದೇಶೀ ಅನುದಾನವು ಚಳವಳಿಯಲ್ಲಿ ಬಿರುಕು, ಒಡಕುಗಳನ್ನು ಹುಟ್ಟು ಹಾಕುತ್ತದೆ. ಕಬಂಧ ಬಾಹುಗಳಿಂದ ವಿಚಾರಗಳನ್ನು ತನ್ನದಾಗಿಸಿಕೊಳ್ಳುತ್ತದೆ ಹಾಗೂ ಹೋರಾಟಗಳ ರ್‍ಯಾಡಿಕಲ್ ಅಂಚನ್ನು ಮೊಂಡುಗೊಳಿಸುತ್ತದೆ. ಇದು ಸೀಮಿತವಾಗಿ ಒಂದು ಸಮಸ್ಯೆಯನ್ನು ಕೇಂದ್ರೀಕರಿಸಿ, ಇಡಿಯ ಸಂದರ್ಭದಿಂದ ಆ ಸಮಸ್ಯೆಯನ್ನು ಬೇರ್ಪಡಿಸಿ ನೋಡುತ್ತಿದೆ. ಪಾಪ್ಯುಲೇಷನ್ ಫಸ್ಟ್ ಪ್ರಚಾರ ಮಾಡುವ ಬಗೆಯಲ್ಲಿ ಕೊನೆಯ ಅಂಶವನ್ನು ಸ್ವೀಕರಿಸುತ್ತಿದೆ ಎಂಬುದನ್ನು ಹೇಳಲು ನಾವು ವಿಷಾದಿಸುತ್ತೇವೆ. ನಿಮ್ಮ ವೆಬ್‌ಸೈಟ್‌ನಲ್ಲಿ ಪಾಪ್ಯುಲೇಶನ್ ಫಸ್ಟ್ ಅಂಕಿಗಳಿಗೆ ಸಂಬಂಧಿಸಿದ ಸಮಸ್ಯೆಯನ್ನು ಮಾತ್ರ ನೋಡುವುದಿಲ್ಲ ಎಂದು ಹೇಳಿದರೂ, ವಿರೋಧಾತ್ಮಕವಾಗಿ ಪಾಪ್ಯುಲೇಷನ್ ಫಸ್ಟ್‌ನ ಮುಖ್ಯ ಅಂಶವೆಂದರೆ ಪ್ರತಿ ದಂಪತಿಗಳಿಗೆ ಇಬ್ಬರು ಮಕ್ಕಳು ಇರುವ ಕುಟುಂಬದ ಗುರಿಯನ್ನು ಮುಟ್ಟುವುದೇ ಆಗಿದೆ. ಅಪಾಯಕಾರಿ ಬೌದ್ಧಿಕತೆಯ ಎರಡು ಮಕ್ಕಳ ಸಂಹಿತೆಯನ್ನು ಮಹಿಳಾ ಗುಂಪುಗಳು ನಿರಂತರವಾಗಿ ಟೀಕಿಸಿವೆ/ತಿರಸ್ಕರಿಸಿವೆ ಎಂಬುದನ್ನು ನೀವು ಅರಿತೇ ಇದ್ದೀರಿ. ಹೆಚ್ಚು ಮಂದಿ ಮಹಿಳೆಯರು ನಿರ್ಧಾರ ಮಾಡುವ ಹಂತದಿಂದಲೇ ಅಂಚಿಗೆ ತಳ್ಳಲ್ಪಟ್ಟಿರುವಂತಹ ಸಂದರ್ಭದಲ್ಲಿ ಎರಡು ಮಕ್ಕಳ ಸಂಹಿತೆ ಶೋಷಣೆಯ ಇನ್ನೊಂದು ಆಯುಧವಾಗಿದೆ. ಇದು ಶೋಷಿತ ವಲಯದಲ್ಲಿ ಹೆಂಗಸರು ಹಾಗೂ ಮಕ್ಕಳನ್ನು ಬಿಟ್ಟು ಬಿಡುವಂತೆ, ಹಾಗೂ ಲೈಂಗಿಕ ಆಯ್ಕೆಯ ಗರ್ಭಪಾತವನ್ನು ಕೂಡಾ ಮಾಡಿಕೊಳ್ಳುವಂತೆ ಒತ್ತಾಯಪಡಿಸುತ್ತಿದೆ. ನಿಮ್ಮ ಈ ಗುರಿಯ ಜೊತೆ 'ಹುಡುಗಿಯನ್ನು ರಕ್ಷಿಸಿ' ಎನ್ನುವ ನಿಮ್ಮ ಕರೆಯನ್ನು ನೀವು ಹೇಗೆ ಜೊತೆಗೂಡಿಸಿಕೊಂಡು ಹೋಗುತ್ತೀರಿ ಎನ್ನುವುದು ನಮಗೆ ಅರ್ಥವಾಗಿಲ್ಲ.

ಈ ಬೌದ್ಧಿಕತೆ ನಿಮ್ಮ ಯುವಕ/ಯುವತಿಯರ ಕುರಿತ ವೇದಿಕೆಯ ಕೇಂದ್ರ ವಿಚಾರದಲ್ಲೂ ಜಾರಿಯಾಗಿದೆ ಎಂಬುದು ನಮ್ಮ ಆತಂಕ. ನಿಮ್ಮ ಸಂದೇಶವು ಭಾರತದ ಹೆಚ್ಚು ಜನಸಂಖ್ಯೆ ಬದುಕಿನ ಗುಣಾತ್ಮಕತೆಯನ್ನು ಕಡಿಮೆ ಮಾಡುತ್ತದಲ್ಲದೇ ದೇಶದಲ್ಲಿ ಪರಿಸರ ಹಾಗೂ ಸಾಮಾಜಿಕ ಸಮಸ್ಯೆಯನ್ನು ಹುಟ್ಟು ಹಾಕುತ್ತದೆ. ನೀವು ಮಾತನಾಡುವ ಈ ದೇಶದ ಹೆಚ್ಚು ಜನಸಂಖ್ಯೆ ಈ ದೇಶದ ಬಡವರು. ಬಡವರು-ಯಾವ ಅನುಮಾನಕ್ಕೂ ಆಸ್ಪದವಿಲ್ಲದ ಹಾಗೆ ಹೆಚ್ಚು ಮಕ್ಕಳನ್ನು ಹೊಂದಿದ್ದಾರೆ. ಏಕೆಂದರೆ ಬದುಕಿನ ಅವಶ್ಯಕತೆಗಳನ್ನು ಪೂರೈಸುವುದಕ್ಕಾಗಿ, ಸಾಯುವ ಮಕ್ಕಳ ಸಂಖ್ಯೆಯ ಸಮಸ್ಯೆಯನ್ನು ಎದುರಿಸುವುದಕ್ಕಾಗಿ, ಆರೋಗ್ಯ ಸೇವೆಯೇ ಇಲ್ಲದಿರುವುದಕ್ಕಾಗಿ ಮತ್ತು ಪುನರ್ ಉತ್ಪಾದನೆಯ ಮೇಲೆ ಇರುವ ಪಿತೃಪ್ರಧಾನತೆಯ ಹಿಡಿತಕ್ಕೋಸ್ಕರ. ಸಂಪನ್ಮೂಲಗಳು ಹೆಚ್ಚು ಬಳಕೆಯಾಗುತ್ತಿರುವುದು, ಹೆಚ್ಚು ಹಾಳಾಗುತ್ತಿರುವುದು ಬಡವರಿಂದಾಗಿ ಅಲ್ಲ, ಅತಿ ದುಡ್ಡಿರುವವರಿಂದಲೇ ಇದೆಲ್ಲ ನಡೆಯುತ್ತಿದೆ. ಭಾರತದ ಅತೀದೊಡ್ಡ ಆದಾಯ ಹೊಂದಿರುವವರು ಜನಸಂಖ್ಯೆಯ 1.44 ರಷ್ಟಿರುವವರು ಮಾತ್ರ. ಇವರು ಒಬ್ಬರು ಅಥವಾ ಇಬ್ಬರು ಮಕ್ಕಳನ್ನು ಹೊಂದಿರುವ ಕುಟುಂಬದವರು. 75% ವಿದ್ಯುಚ್ಛಕ್ತಿ, ಪೆಟ್ರೋಲಿಯಂ, ಮನೆಯ ಯಾಂತ್ರಿಕ ಉಪಕರಣಗಳು ಪರಿಸರಕ್ಕೆ ಅಪಾಯ ತರುವಂತಹ ಉತ್ಪಾದನೆಗಳನ್ನು ಇವರು ಬಳಸುತ್ತಾರೆ.

ಪಾಪ್ಯುಲೇಷನ್ ಫಸ್ಟ್ ಅಪಾಯಕಾರಿ ಗರ್ಭನಿರೋಧಕಗಳ ಬಗ್ಗೆ ಯಾವ ನಿಲುವನ್ನೂ ತೆಗೆದುಕೊಳ್ಳುವುದಿಲ್ಲ ಎಂಬುದೂ ಒಂದು ಅಚ್ಚರಿಯ ವಿಚಾರವಾಗಿದೆ. ಇಂದು ಅನೇಕ ರೀತಿಯ ದೀರ್ಘಕಾಲದ ಬಳಕೆಯ, ಹಾರ್ಮೋನಸ್ ಗರ್ಭನಿರೋಧಕಗಳು ಕಾನೂನು ಬಾಹಿರವಾಗಿಯೂ ಲಭ್ಯವಾಗುತ್ತಿವೆ. ಕಾಲಾವಧಿಯ ಯೋಜನೆಗೆ ಎಂದು ಜಾಹೀರಾತುಗೊಳ್ಳುವ ಇವುಗಳು ಖಾಯಂ ಆಗಿ ತಾಯ್ತನವನ್ನು ನಾಶಗೊಳಿಸುತ್ತಿವೆ, ಅಂಗವೈಕಲ್ಯವನ್ನು ಹುಟ್ಟಿನಿಂದಲೇ ಮಕ್ಕಳಲ್ಲಿ ಉಂಟುಮಾಡುತ್ತವೆ. ಕ್ಯಾನ್ಸರ್ ಹರಡುವಿಕೆ, ಹಾಗೂ ಇತರ ಮಾರಕ ಆರೋಗ್ಯ ಸಮಸ್ಯೆಗಳನ್ನು ಮಕ್ಕಳಲ್ಲಿ ಹುಟ್ಟು ಹಾಕುತ್ತವೆ. ಅತ್ಯಂತ ಪ್ರಭಾವಶಾಲಿಯಾದ ಗರ್ಭನಿರೋಧಕದ ಅಗತ್ಯವಿದೆ ಎಂಬುದರಲ್ಲಿ ಅನುಮಾನವಿಲ್ಲ. ಆದರೆ ಅದಕ್ಕಾಗಿ ಮಹಿಳೆಯ ರಕ್ಷಣೆ ಹಾಗೂ ಏಳ್ಗೆಯನ್ನು ಒತ್ತೆ ಇಡಬೇಕು ಎಂದಲ್ಲ. ನಿಮ್ಮ ಜನಸಂಖ್ಯೆಗೆ ಸಂಬಂಧಿಸಿದ ಪ್ರಚಾರ ಹಾಗೂ ಸಂವಾದ ಹೇಗೆ ಈ ವಿಚಾರಗಳನ್ನು ನಿರ್ಲಕ್ಷಿಸಿದೆ ಎಂಬುದು ನಮಗೆ ಅರ್ಥವಾಗುವುದಿಲ್ಲ.

'ಕುಟುಂಬ ಯೋಜನೆ'ಯಿಂದ 'ಕುಟುಂಬ ಕಲ್ಯಾಣ' ಹಾಗೂ ಇತ್ತೀಚಿನ 'ಪುನರ್ ಉತ್ಪಾದನೆಯ ಆರೋಗ್ಯ', ಇಂತಹ ಭಾರತದ ಜನಸಂಖ್ಯಾ ನಿಯಂತ್ರಣದ ಯೋಜನೆಗಳು ಯಾವಾಗಲೂ ಕಡು ಬಡವರು ಹಾಗೂ ಅಮಾಯಕರನ್ನು ಅತ್ಯಂತ ಹೀನಾಯವಾಗಿ ಗುರಿ ಮಾಡಿಕೊಂಡಿವೆ. ಇದು ಬಡತನ, ಪರಿಸರ ನಾಶ, ಭೂಮಿ ಸುಧಾರಣೆ, ಸಂಪನ್ಮೂಲಗಳ ಹಂಚಿಕೆ, ಮೂಲಭೂತ ಸೌಕರ್ಯ, ಸಾಮಾಜಿಕ ಭದ್ರತೆಯಂತಹ-ಸಾಮಾಜಿಕ ಅಶಾಂತಿಯ ನಿಜವಾದ ಕಾರಣಗಳನ್ನು ದಿಕ್ಕು ತಪ್ಪಿಸಿದೆ. ಪಾಪ್ಯುಲೇಷನ್ ಫಸ್ಟ್ ಮಹಿಳೆಯರ ಆರೋಗ್ಯದ ಚಳವಳಿಯ ತಿರುಳಾದ ಈ ಒಂದು ದುರದೃಷ್ಟ ವಾಸ್ತವವನ್ನು ಬದಲಾಯಿಸಲು ಕೆಲಸ ಮಾಡುತ್ತಿದೆ ಎಂದು ಗುರುತಿಸುವಂಥ ಯಾವ ಕಾರ್ಯವಿಧಾನವೂ ಕಾಣುತ್ತಿಲ್ಲ. ಇಂತಹ ಸಂದರ್ಭದಲ್ಲಿ ನಮ್ಮ ನಂಬಿಕೆ, ಕಾಳಜಿಗಳನ್ನು ರಾಜಿಮಾಡಿಕೊಳ್ಳಲು ನಮಗೆ ಇಷ್ಟವಿಲ್ಲವಾದ್ದರಿಂದ ನಿಮ್ಮ ಪ್ರಶಸ್ತಿಯನ್ನು ಒಪ್ಪಿಕೊಳ್ಳಲು ನಮಗೆ ಕಷ್ಟವಾಗುತ್ತದೆ.

ವಂದನೆಗಳೊಂದಿಗೆ

**ಮಾನಸ ಕಲೆಕ್ಟೀವ್**



## ಪ್ರತಿಕ್ರಿಯೆಗಳು

### ಸ್ವಾಮಿದಾಸ್ ಅವರ ದೃಷ್ಟಿಯಲ್ಲಿ

UNFPA ಹಾಗೂ ಇತರ ಅಂತರರಾಷ್ಟ್ರೀಯ ಸಂಸ್ಥೆಯ ಪ್ರತಿನಿಧಿಗಳು ಭಾಷಣಕಾರರಾಗಿದ್ದ 'ಲೀಡರ್‌ಶಿಪ್ ಡೆವಲಪ್‌ಮೆಂಟ್ ಮೆಕ್ಯಾನಿಸಂ' ಸಭೆಯಲ್ಲಿ ಭಾಗವಹಿಸಿದ ಇವರು ತಮ್ಮ ಅನುಭವವನ್ನು ಇ.ಮೇಲ್‌ನಲ್ಲಿ ಹಂಚಿಕೊಂಡಿದ್ದಾರೆ. L.D.M ಬಿಹಾರ್ ಮತ್ತು ಜಾರ್ಖಂಡದಲ್ಲಿ ಕೆಲಸ ಮಾಡುತ್ತಿರುವುದನ್ನು ವಿವರಿಸುತ್ತಾ ಯಾವ ರೀತಿಯ ಪುನರ್ ಉತ್ಪಾದನೆಯ ಬಗ್ಗೆ ಇವರು ಮಾತನಾಡುತ್ತಿದ್ದಾರೆಂದು ಆಶ್ಚರ್ಯ ಪಡುತ್ತಾರೆ. ಡಿಪೋ ಪ್ರೊವೇರಾದಂಥ ಚುಚ್ಚುಮದ್ದಿನ ಗರ್ಭನಿರೋಧಕ ಗಳನ್ನು ಕ್ರಿಯಾತ್ಮಕವಾಗಿ ಪ್ರೋತ್ಸಾಹಿಸುವಂತಹ ಇವರ ರೀತಿಗಳು ಮಹಿಳೆಯ ಬಗ್ಗೆ ಎಷ್ಟು ಕಾಳಜಿ ಹೊಂದಿರಲು ಸಾಧ್ಯ ಎಂಬ ಬಗ್ಗೆ ಇವರು ಆಶ್ಚರ್ಯಪಡುತ್ತಾರೆ.

### ಹಣ ಚಳವಳಿಯೊಳಗೆ ಬಿರುಕು ತರುತ್ತದೆ

ಪ್ರಶಸ್ತಿಯನ್ನು ನಿರಾಕರಿಸಿದ 'ನಮ್ಮ ಮಾನಸ' ಧೈರ್ಯಕ್ಕೆ ಮೆಚ್ಚಬೇಕು. ಪ್ರಶಸ್ತಿ ಏನು ಒಳಗೊಂಡಿದೆಯೋ ಗೊತ್ತಿಲ್ಲ. ನಿರಾಕರಿಸಿದ ಕಾರಣಗಳನ್ನು ಚೆನ್ನಾಗಿ ವಿವರಿಸಿದ್ದೀರಿ. ವಿದೇಶಿ ನೆರವು ದುರದೃಷ್ಟವಶಾತ್ ಚಳವಳಿಯೊಳಗೆ ಬಿರುಕು ಹುಟ್ಟು ಹಾಕುತ್ತದೆ. ಕಬಂಧ ಬಾಹುಗಳಿಂದ ವಿಚಾರಗಳನ್ನು ತನ್ನದಾಗಿಸಿಕೊಳ್ಳುತ್ತದೆ, ಹೋರಾಟಗಳ ರ‍್ಯಾಡಿಕಲ್ ಅಂಚನ್ನು ಮೊಂಡು ಗೊಳಿಸುತ್ತದೆ ಎಂಬುದನ್ನು ನಾನು ಸಂಪೂರ್ಣವಾಗಿ ಒಪ್ಪಿಕೊಳ್ಳುತ್ತೇನೆ. ಇದು ಕೇವಲ ವಿದೇಶೀ ನೆರವಿಗೆ ಮಾತ್ರವಿಲ್ಲ ಎಲ್ಲಾ ರೀತಿಯ ಅನುದಾನಕ್ಕೂ ಅನ್ವಯಿಸುತ್ತದೆ. ಹಣ ಒಡಕು ಹುಟ್ಟಿಸುತ್ತದೆ. ... ಭ್ರಷ್ಟರನ್ನಾಗಿಸುತ್ತದೆ.... ಕಬಂಧ ಬಾಹುಗಳಿಂದ ಅಪ್ಪಿಕೊಳ್ಳುತ್ತದೆ.

*–ಅಖಿಲೇಶ್ವರಿ ರಾಮಗೌಡ*

### ಯೋಗ್ಯ ತೀರ್ಮಾನ

ನಿಮಗೆ ದನ್ಯವಾದಗಳು

ನಿಮ್ಮ ಪತ್ರ ಮುಖ್ಯವಾದ ಸಮಸ್ಯೆಯ ಮೇಲೆ ಬೆಳಕು ಚೆಲ್ಲುತ್ತದೆ, ಹಾಗೂ ಇಂದಿನ ಸಂದರ್ಭಕ್ಕೆ ಹೆಚ್ಚು ಪ್ರಸ್ತುತ ಆಗಿದೆ. ಅಪಾಯಕಾರಿ ಕುಟುಂಬ ಯೋಜನಾ ಕ್ರಮವನ್ನು ಪ್ರೋತ್ಸಾಹಿಸುವ ಹಾಗೂ ಇಬ್ಬರು ಮಕ್ಕಳ ಸಂಹಿತೆಯನ್ನು ಜಾರಿಗೆ ತರುವ ಹುನ್ನಾರ ನಡೆಯುತ್ತಲೇ ಇರುತ್ತದೆ.

*– ಸಮ–ಮಹಿಳಾ ಆರೋಗ್ಯ ಸಂಘಟನೆ*

### ನಿಮ್ಮ ನಂಬಿಕೆ, ರಾಜಕೀಯ ನಿಲುವುಗಳು ಸ್ವಾಗತಾರ್ಹ

UNFPA ಪ್ರಶಸ್ತಿಯನ್ನು ನಿರಾಕರಿಸಿದ ನಿಮ್ಮನ್ನು ನಾವು ಸಹೇಲಿಯಿಂದ ಅಭಿನಂದಿಸುತ್ತೇವೆ. ಇದು ಗಟ್ಟಿಯಾದ ನಿಮ್ಮ ರಾಜಕೀಯ ನಿಲುವು ಹಾಗೂ ಬದ್ಧತೆಯನ್ನು ತೋರಿಸುತ್ತದೆ. ಇದು ಇಂದಿನ ದಿನಗಳಲ್ಲಿ ತೀರಾ ಅಪರೂಪ. ನಿಮ್ಮ ಪತ್ರದಲ್ಲಿ ನೀವು ವಿದೇಶೀ ನೆರವಿನ ರಾಜಕೀಯದ ಬಗ್ಗೆ, ಸ್ವಾಯತ್ತತೆಯ ಬಗ್ಗೆ ಮುಖ್ಯವಾದ ಪ್ರಶ್ನೆಗಳನ್ನು ಎತ್ತಿದ್ದೀರಿ. ಇಬ್ಬರು ಮಕ್ಕಳ ಸಂಹಿತೆ, ಲೈಂಗಿಕ ಆಯ್ಕೆಯ ಗರ್ಭಪಾತ, ಅಪಾಯಕಾರಿ ಗರ್ಭನಿರೋಧಕಗಳ ಬಗ್ಗೆ ಕೂಡಾ ಪ್ರಶ್ನೆ ಎತ್ತಿದ್ದೀರಿ. ದಶಕಗಳಿಂದ ಬಡ ಮೂರನೇ ಜಗತ್ತು (ಅಥವಾ ಮೂರನೇ ಜಗತ್ತಿನ ಬಡವರು) ಹೆಚ್ಚು ಜನರನ್ನು ಉತ್ಪಾದಿಸಿ ಬೇರೆಯವರ ಗುಣಾತ್ಮಕ ಬದುಕಿಗೆ ಮುಳ್ಳಾಗುತ್ತಿದ್ದಾರೆಂಬ ಆಪಾದನೆಯನ್ನು ವಿರೋಧಿಸುತ್ತಲೇ ಬರುತ್ತಿದ್ದಾರೆ. ಅನುದಾನಿಗಳು ಅನುದಾನಿಗಳಾಗಿಯೇ ಉಳಿದಿರುತ್ತಾರೆ. ಹಾಗೂ ವಿದೇಶೀ ನೆರವಿನ ರಾಜಕೀಯ ಮತ್ತು ಭಾಷೆ ಕಾಲದ ಜೊತೆ ಬದಲಾಗಿಯೇ ಇಲ್ಲ. ಸ್ವಾಯತ್ತವಾಗಿರುವ ಗುಂಪುಗಳು ವಿದೇಶೀ ನೆರವಿನ ಸವಾಲುಗಳನ್ನು ಎದುರಿಸಿ ಹೋರಾಟ ನಡೆಸುವ ಸಂದರ್ಭದಲ್ಲಿ ನಿಮ್ಮ ನಂಬಿಕೆ, ರಾಜಕೀಯ ನಿಲುವುಗಳು ಪ್ರೋತ್ಸಾಹದಾಯಕವಾಗಿವೆ.

ಇದು ಕಠಿಣ ಪರೀಕ್ಷೆಯ ಕಾಲ. ಆರೋಗ್ಯ, ಪರಿಸರ ಹಾಗೂ ಅಭಿವೃದ್ಧಿಯ ನಡುವಿನ ನಂಟನ್ನು ನೋಡುವುದು ಸುಲಭ, ಆದರೆ ಪ್ರತಿಕ್ರಿಯಿಸುವುದು ಹಾಗೂ ಹೋರಾಡುವುದು ಕಷ್ಟಕರವಾಗಿದೆ. ಇಂತಹ ಸಂದರ್ಭದಲ್ಲಿ ನಿಮ್ಮ ನಿಲುವು ಪ್ರೋತ್ಸಾಹದಾಯಕವಾಗಿದೆ.

**ನಿಮ್ಮ ಜೊತೆಗಿರುವ – ಸಹೇಲಿ.**

(ಸಹೇಲಿ: ದೆಹಲಿಯ ಸ್ವಾಯತ್ತ ಮಹಿಳಾ ಸಂಸ್ಥೆ)

## ಕೆಟ್ಟ ವಸಾಹತುಶಾಹಿ ಅಜೆಂಡಾಗಳನ್ನು ಒಲ್ಲೆವು

'ನಮ್ಮ ಮಾನಸ' ಪತ್ರಿಕೆ ಲಿಂಗಸೂಕ್ಷ್ಮತೆಗಾಗಿ ಲಾಡ್ಲಿ ಮಾಧ್ಯಮ ಪ್ರಶಸ್ತಿಯನ್ನು ತಿರಸ್ಕರಿಸಿದ ಬೆನ್ನಲ್ಲೇ ಮಂಗೈ (ಪದ್ಮ) ರಂಗಕಲಾವಿದೆ ಕೂಡಾ ಪ್ರಶಸ್ತಿಯನ್ನು ನಿರಾಕರಿಸಿರುತ್ತಾರೆ. 'ನಮ್ಮ ಮಾನಸ' ಪ್ರಶಸ್ತಿ ನಿರಾಕರಿಸಿ ನೀಡಿದ ಹೇಳಿಕೆಯನ್ನು ನೋಡಿದ ಇವರು 'ಪಾಪ್ಯುಲೇಷನ್ ಫಸ್ಟ್'ನ ವೆಬ್‌ಸೈಟ್‌ನಲ್ಲಿ ಅವರ ಸಂಘಟನೆಯ ಬಗ್ಗೆ ಓದಿರುತ್ತಾರೆ. ಅನಂತರ ಅವರು ರಂಗ ಚಟುವಟಿಕೆಗಳ ಲಿಂಗ ಸೂಕ್ಷ್ಮತೆಗಾಗಿ ನೀಡಿದ ಲಾಡ್ಲಿ ಮಾಧ್ಯಮ ಪ್ರಶಸ್ತಿ ನಿರಾಕರಿಸಿದರು. ಇವರು ಸಂಘಟಕರಿಗೆ ಹೀಗೆ ಬರೆಯುತ್ತಾರೆ :

"ವರ್ಗ, ಜಾತಿ, ಪ್ರಾದೇಶಿಕತೆಯ ವಿಭಿನ್ನತೆಗಳು ಇವುಗಳ ಹಿನ್ನೆಲೆಯಲ್ಲಿ ರಂಗ ಚಟುವಟಿಕೆಯ ನನ್ನ ಕೆಲಸವನ್ನು ಯಾವುದೇ ಒಪ್ಪಂದ ಮಾಡಿಕೊಳ್ಳದೇ ನಾನು ಇಲ್ಲಿಯವರೆಗೆ ನಡೆಸಿಕೊಂಡು ಬಂದಿದ್ದೇನೆ. ಜನರನ್ನು ಸಮುದಾಯ ಎಂದು ಕರೆಯುವುದು ನನ್ನ ಕೆಲಸದ ತಿರುಳಿನ ವಿರುದ್ಧವಾಗಿದೆ. ಮಹಿಳೆಯರಿಗೆ ಹಾಗೂ ಹೆಣ್ಣುಮಕ್ಕಳಿಗೆ ನಿರೋಧ್ ಹಂಚುವುದು ಪ್ರಭುತ್ವ ಹಾಗೂ ಇತರ ಸಂಘಟನೆಗಳು ತೆಗೆದುಕೊಂಡಿರುವ ಪಿತೃಪ್ರಧಾನದ ಹೆಜ್ಜೆ ಎಂದು ಮಹಿಳಾ ಗುಂಪುಗಳು ಯಾವಾಗಲೂ ಖಂಡಿಸುತ್ತಲೇ ಬಂದಿವೆ.

"ಒಬ್ಬ ಕಲಾವಿದೆಯಾಗಿ ನಾನು ನನ್ನ ವ್ಯಕ್ತಿತ್ವದ ಸಮಗ್ರತೆಯನ್ನು ಕಾಯ್ದುಕೊಂಡು ಕೆಲಸ ಮುಂದುವರಿಸಿಕೊಂಡು ಹೋಗುವಲ್ಲಿ ವಿಶ್ವ ಮಟ್ಟದ ಸಂಘಟನೆಗಳ ಅಜೆಂಡಾಗಳಿಂದ ನಿಯಂತ್ರಿಸಲ್ಪಡುವುದು ನನಗೆ ಇಷ್ಟವಿಲ್ಲ. ಕೆಟ್ಟ ವಸಾಹತುಶಾಹಿ ಅಜೆಂಡಾಗಳು ನಮ್ಮ ದೇಶದ 'ಮೇಮ್‌ಸಾಹೇಬ್'ಗಳಿಂದ ಕಾರ್ಯರೂಪಕ್ಕೆ ಬರುತ್ತಿರುತ್ತವೆ."

ಹೀಗೆ ಬರೆಯುವ ಇವರು ಪ್ರಶಸ್ತಿಯನ್ನು ಸ್ವೀಕರಿಸದಿರುವುದಕ್ಕಾಗಿ ಕ್ಷಮೆ ಯಾಚಿಸುತ್ತಾರೆ ಹಾಗೂ ಪ್ರಶಸ್ತಿಗೆ ಆಯ್ಕೆ ಮಾಡಿದುದಕ್ಕಾಗಿ ವಂದನೆಗಳನ್ನು ತಿಳಿಸುತ್ತಾರೆ.

# ಸಬಲೀಕರಣ ಮತ್ತೆ ಬಲಗೊಳ್ಳಬೇಕು

## ಶ್ರೀಲತಾ ಬಾಟ್ಲೀವಾಲ ಅವರ ಚಿಂತನೆಗಳು

*ಸಂ.ಅನು: ಡಾ॥ ಬಿ.ಎನ್. ಸುಮಿತ್ರಾಬಾಯಿ*

**ಕ**ಳೆದ ಮೂವತ್ತು ವರ್ಷಗಳಲ್ಲಿ ಅಭಿವೃದ್ಧಿಗೆ ಸಂಬಂಧಿಸಿದ ಶಬ್ದ ಭಂಡಾರಕ್ಕೆ ಬಂದು ಸೇರಿರುವ ಹೊಸ ಶಬ್ದಗಳ ಪೈಕಿ ಬಹುಶಃ ತುಂಬ ವ್ಯಾಪಕವಾಗಿ ಬಳಕೆಗೂ ದುರ್ಬಳಕೆಗೂ ಒಳಗಾಗಿರುವ ಪದ 'ಸಬಲೀಕರಣ' [Empowerment]. ಒಂದು ಖಚಿತವಾದ ರಾಜಕೀಯ ಪರಿಕಲ್ಪನೆಯೊಂದಿಗೆ ಹುಟ್ಟಿದ ಈ ಶಬ್ದ, ಅದರಂಥದೇ ಇತರ ಶಬ್ದಗಳಂತೆಯೇ ಮುಖ್ಯ ವಾಹಿನಿಗೆ ಸೇರ್ಪಡೆಯಾಗಿದೆ. ಆದರೆ ಹೀಗೆ ಪ್ರಧಾನ ವಾಹಿನಿಯಲ್ಲಿ ಸೇರುವ ಹೊತ್ತಿಗೆ ಆ ಶಬ್ದಕ್ಕೆ ಮೂಲತಃ ಇದ್ದ ಒಂದು ಹೋರಾಟತಂತ್ರದ ತಾತ್ವಿಕಮೌಲ್ಯವೇ ಕಳವಾಗಿ ಹೋಗಿದೆ.

೧೯೮೦ರ ದಶಕದಲ್ಲಿ [Global South ಎಂಬ ಪದ ಹುಟ್ಟುವುದಕ್ಕೂ ಮೊದಲು] ತೃತೀಯ ಜಗತ್ತೆಂದೇ ಪ್ರಸಿದ್ಧವಾಗಿದ್ದ ಅಭಿವೃದ್ಧಿಶೀಲ ರಾಷ್ಟ್ರಗಳ ಸ್ತ್ರೀವಾದಿ ಹೋರಾಟಗಾರರಲ್ಲಿ ಅಭಿವೃದ್ಧಿ ಯೋಜನೆಗಳ ಕಾರ್ಯಕ್ರಮದಲ್ಲಿ ನಡುವೆ ಪ್ರವೇಶಿಸುವ (Intervention) ಹಂತದಲ್ಲಿ ಒಂದು ತೀವ್ರ ಅತೃಪ್ತಿ ಹುಟ್ಟಿತ್ತು. ಅಂದು ಪ್ರಚಲಿತವಿದ್ದ ರಾಜಕೀಯೇತರ ಹಾಗೂ ಆರ್ಥಿಕ ಮಾದರಿಗಳ ಸಂಬಂಧವಾಗಿ ಅವರಲ್ಲಿ ಅಸಮಾಧಾನ ತೀವ್ರವಾಗುತ್ತಿತ್ತು. ಆ ಅತೃಪ್ತಿ, ಅಸಮಾಧಾನಗಳ ಕಾಲದಲ್ಲಿ ಅವರು ಹುಟ್ಟುಹಾಕಿದ್ದ ಚರ್ಚೆಗಳು, ವಿಮರ್ಶೆಗಳು, ಡಿಸ್ಕೋರ್ಸ್‌ಗಳ ಒಳಗಿನಿಂದ 'ಮಹಿಳಾ ಸಬಲೀಕರಣ' ಎಂಬ ತಾತ್ವಿಕ ಪರಿಕಲ್ಪನೆ ರೂಪು ತಳೆಯಿತು.

ಆ ಕಾಲದಲ್ಲಿ ಲ್ಯಾಟಿನ್ ಅಮೆರಿಕಾದಲ್ಲಿ Paulo Freire ಪ್ರತಿಪಾದನೆ ಮಾಡುತ್ತಿದ್ದ Conscientisation– ಎಂಬ ಕಾರ್ಯವಿಧಾನದೊಂದಿಗೆ ಸ್ತ್ರೀವಾದಿಗಳು ಸಂವಾದ ನಡೆಸುತ್ತಿದ್ದರು, ಆದರೆ ಲಿಂಗತ್ವ ಮತ್ತು ಮಹಿಳಾ ಅಧೀನತೆಗಳನ್ನು ಅವರ ವಿಮೋಚನೆಗೆ ಅವಶ್ಯಕವಾಗುವ ಮೂಲ ಘಟಕಗಳೆಂಬುದನ್ನು ನಿರ್ಲಕ್ಷಿಸಿದ್ದರು. ಆ ಕಾಲದಲ್ಲೇ ಜಾಗತಿಕವಾಗಿ ಕಣ್ಣೆದುರಲ್ಲೇ ಸಂಭವಿಸುತ್ತಿದ್ದ ಅನೇಕ ನಿಟ್ಟಿನ ಸಾಮಾಜಿಕ ಚಳವಳಿಗಳೂ ಸ್ತ್ರೀವಾದಿ ಕಾರ್ಯಕರ್ತರ ಮೇಲೆ ವಿಶೇಷ ಪ್ರಭಾವ ಬೀರಿದ್ದವು. ಆಂಟೋನಿಯೋಗ್ರಾಮ್ಷಿ ಪ್ರತಿಪಾದಿಸಿದ್ದ 'ಕೆಳಸ್ತರೀಯರು' (Subatterns) ಪರಿಕಲ್ಪನೆ, ಮುಖ್ಯ ತಾತ್ವಿಕತೆಗಳ ಯಾಜಮಾನ್ಯ (Hegemony), ಸಾಮಾಜಿಕ ರಚನಾ ಸಿದ್ಧಾಂತ (Construction) ಹಾಗೂ ವಸಾಹತೋತ್ತರವಾದ (Post-Colonialism) ಮುಂತಾದವು ಇಂತಹ ಮುಖ್ಯ ಪ್ರಭಾವ ಬೀರಿದ ಚಿಂತನೆಗಳು.

ಎಂಬತ್ತರ ದಶಕದಲ್ಲಿ ಪ್ರಚಲಿತವಾಗಿದ್ದ ಇಂಥ ಹಲವು ರಾಜಕೀಯ ಸಿದ್ಧಾಂತಗಳ ಒಳಕ್ರಿಯೆಗಳ ಒಟ್ಟು ಫಲವು ಪಿತೃಪ್ರಧಾನ ವ್ಯವಸ್ಥೆಯ ವಿರುದ್ಧವಷ್ಟೇ ಆಗಿರಲಿಲ್ಲ. ಆ ವ್ಯವಸ್ಥೆಯದೇ ಏಜೆಂಟ್‌ಗಳಾದ ವರ್ಗ, ಜನಾಂಗ, ಬುಡಕಟ್ಟು ಹಾಗೂ ಇಂಡಿಯಾದಲ್ಲಿನ ಜಾತಿ, ಧರ್ಮಗಳೂ ಸೇರಿದ ಹಾಗೆ ಮಹಿಳೆಯರ ಸ್ಥಾನಮಾನಗಳನ್ನು ನಿರ್ಣಯಿಸುವಂಥ ಎಲ್ಲ ಸಂರಚನೆಗಳಿಗೂ ಸವಾಲೊಡ್ಡುವ ನಿಟ್ಟಿನ ರಾಜಕೀಯ ಪರಿವರ್ತನಾತತ್ವವಾಗಿ ಮಹಿಳಾ ಸಬಲೀಕರಣ ಎಂಬುದು ಹುಟ್ಟಿತು. ಜಾಗತಿಕ ದಕ್ಷಿಣಭಾಗದಲ್ಲಿ, ವಿಶೇಷವಾಗಿ ಲ್ಯಾಟಿನ್ ಅಮೆರಿಕಾ ಮತ್ತು ದಕ್ಷಿಣ ಏಷ್ಯಾಗಳಲ್ಲಿ ಆ ಅವಧಿಯಲ್ಲೇ ಸ್ತ್ರೀವಾದಿ ಚಳವಳಿಗಳು ಪ್ರಜ್ಞಾಜಾಗೃತಿಯ ಕಾರ್ಯದ ಮೂಲಕವಾಗಿ ತಮ್ಮದೇ ಸ್ಪಷ್ಟದಾರಿಗಳನ್ನು ರೂಪಿಸಿಕೊಳ್ಳುತ್ತಿದ್ದವು. ಲಿಂಗತ್ವ ಸಮಾನತೆಗಾಗಿ ಸಂಘಟಿತರಾಗಲು, ಕ್ರಾಂತಿಕಾರಕ ಚಳವಳಿಯನ್ನು ಕಟ್ಟುವತ್ತ ಕಾರ್ಯನಿರತವಾದವು. Empowerment ಎನ್ನುವುದು, ಒಂದು ಸಾಮಾಜಿಕ–ರಾಜಕೀಯ ಪ್ರಕ್ರಿಯೆಯಾಗಿದ್ದು ಅದರ ನಿರ್ಣಾಯಕ ಪರಿಕಲ್ಪನೆ ಎಂದರೆ 'ಅಧಿಕಾರ'. ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಅಧಿಕಾರ ಹೊಂದಿರುವ ವ್ಯಕ್ತಿಗಳ/ಸಾಮಾಜಿಕ ಗುಂಪುಗಳ ನಡುವೆ ಪ್ರವೇಶಿಸಿ ಅದನ್ನು ಪಲ್ಲಟಗೊಳಿಸುವುದೇ ಸಬಲೀಕರಣ – ಎಂಬ ತಿಳಿವಳಿಕೆ ಅಂದಿನ ಹೋರಾಟ ಸಿದ್ಧಾಂತವಾಗಿತ್ತು.

೧೯೯೦ರ ದಶಕದ ಶುರುವಿನಲ್ಲಿ ಅಭಿವೃದ್ಧಿಯ ಜಾರ್ಗನ್ನಿನಲ್ಲಿ ಈ ಸಬಲೀಕರಣಕ್ಕೆ ಹೆಮ್ಮೆಯ ಜಾಗ ಸಿಕ್ಕಿತು. ಮೊದಲಿದ್ದ ವಿಸ್ತಾರವಾದ ಅರ್ಥದ ಸಾಮಾಜಿಕ ಬದಲಾವಣೆ ಪ್ರಕ್ರಿಯೆಗಳನ್ನು ಸೂಚಿಸಲಿಕ್ಕಾಗಿಯೇ ಅದನ್ನು ಬಳಸುತ್ತಿದ್ದರೂ ಅದನ್ನು ಮಹಿಳೆಯರು ಮತ್ತು ಲಿಂಗತ್ವದ ಪ್ರಶ್ನೆಗಳಿಗೇ ಹೆಚ್ಚಾಗಿ ಅನ್ವಯಿಸಲಾಗುತ್ತಿತ್ತು. ಅಭಿವೃದ್ಧಿ ಪರವಾಗಿ ಕೆಲಸ ಮಾಡುವ ಸಹಾಯಕ ಏಜೆನ್ಸಿಗಳು [ಬಹುಮುಖ, ದ್ವಿಮುಖ ಮತ್ತು ಖಾಸಗಿ] ಸದಾ ಇಂಥ ಪರಿವರ್ತನೆಯ ವೇಗವರ್ಧಕವಾದ ಮಾಯಾ ಬುಲೆಟ್‌ಗಳಿಗಾಗಿ ಹುಡುಕಾಡುತ್ತಿರುತ್ತವೆ. ಅಂಥ ಏಜೆನ್ಸಿಗಳೂ ಈ 'ಸಬಲೀಕರಣ' ಎಂಬ ಪದವನ್ನು ಅವಚಿ ಹಿಡಿದುಕೊಂಡು, ತಾವು ಆ ಮೊದಲು ಬಳಸುತ್ತಿದ್ದ 'ಜನರ ಪಾಲ್ಗೊಳ್ಳುವಿಕೆ', 'ಮಹಿಳಾ ಅಭಿವೃದ್ಧಿ' ಮುಂತಾದ ಪದಗಳಿಗೆ ಬದಲಾಗಿ ಈ ಪದವನ್ನು ಬಳಸಲು ಆರಂಭಿಸಿದವು.

೧೯೯೫ರಲ್ಲಿ ಬೀಜಿಂಗ್‌ನಲ್ಲಿ ನಡೆದ ನಾಲ್ಕನೇ ವಿಶ್ವ ಮಹಿಳಾ ಸಮ್ಮೇಳನದಲ್ಲಿ ಲಿಂಗತ್ವ ಪ್ರಶ್ನೆಗೆ ಪ್ರಗತಿಪರ ಪರಿಹಾರ ಎಂದರೆ ಮಹಿಳೆಯರ ಸಬಲೀಕರಣವೇ ಎಂಬುದನ್ನು ಪ್ರಾತ್ಯಕ್ಷಿಕವಾಗಿ ಪ್ರಯೋಗಿಸಲು ಸರ್ಕಾರೇತರ ಕಾರ್ಯಕರ್ತೆಯರು ಸರ್ಕಾರಗಳಿಗೆ ಈ ಹೊಸ ಪರಿಕಲ್ಪನೆಯನ್ನು ಪರಿಚಯಿಸಲು ಬಹಳ ಶ್ರಮವಹಿಸಿದರು. ಭಾರತದಲ್ಲಿ ಸ್ತ್ರೀವಾದಿಗಳು ಪಿತೃಸಂಸ್ಕೃತಿಯ ಲಿಂಗತ್ವ ಸಂಬಂಧಗಳನ್ನು ಪ್ರಶ್ನಿಸುತ್ತಿದ್ದುದು, ಸರ್ಕಾರವು ಪ್ರಗತಿಪರ ನೀತಿಯತ್ತ ಆಸಕ್ತವಾಗಿದ್ದುದು, ಸ್ವಸಹಾಯ ಸಂಘ–ಸಂಸ್ಥೆಗಳು ಏನಾದರೂ ಹೊಸತನ್ನು ಮಾಡಲು ಕಾತರಿಸುತ್ತಿದ್ದುದು... ಮುಂತಾದ ಹಲವು ದಿಕ್ಕಿನ ರಾಜಕೀಯ ಹಾದಿಗಳ ಮುಖಾಂತರವಾಗಿ ಪ್ರಯಾಸಪಡುತ್ತಾ ಸಬಲೀಕರಣ ತತ್ವ ಇಂಡಿಯಾದಲ್ಲಿ ಪ್ರವೇಶ ಪಡೆಯಿತು. ೯೦ರ ದಶಕದ ಕೊನೆಯ ವೇಳೆಗೆ ಸರ್ಕಾರಿ ಅಧಿಕಾರಿ ವರ್ಗ, ಸಹಾಯಕ ಸಂಘಟನೆಗಳು, ಅಭಿವೃದ್ಧಿ ವೃತ್ತಿ ನಿರತರು ಮತ್ತು ಸ್ತ್ರೀವಾದಿ ಚಳವಳಿಗಾರರು, ಅವರನ್ನು ಬೆಂಬಲಿಸುವವರು– ಎಲ್ಲರೂ 'ಮಹಿಳಾ ಸಬಲೀಕರಣ' ಪದವನ್ನು ಬಳಸತೊಡಗಿದ್ದರು. ಬೆಬೆಲ್ ಹೇಳಿದ ತತ್ವದ ಅರ್ಥವೇ ಕಾಣೆಯಾಗಿ ಅವನ ಮುಂದಿನವರು ಅವನ ಮಾತುಗಳನ್ನು ಬಳಸತೊಡಗಲಿಲ್ಲವೆ? Empowerment ಎಂಬುದರ ಅರ್ಥ ಏನು ಎಂಬ ಸ್ಪಷ್ಟ ತಿಳಿವಳಿಕೆ ಇಲ್ಲದಿದ್ದರೂ ಮಹಿಳಾ ಸಮಸ್ಯೆ, ಲಿಂಗತ್ವ ಸಮಾನತೆಗಳ ಬಗ್ಗೆ ಆಸಕ್ತಿ, ಕಳಕಳಿ, ಇದ್ದವರೆಲ್ಲರೂ ಈ ಹೊಸಪದವನ್ನು ಆಡತೊಡಗಿದರು. ಅದರ ಅರ್ಥ ಏನಿತ್ತು ಎಂಬುದನ್ನು ಯಾರೂ, ಯಾವತ್ತೂ ಸ್ಪಷ್ಟವಾಗಿ ಉಚ್ಚರಿಸಿಯೇ ಇರಲಿಲ್ಲ.

ಹೀಗೆ Empowerment ಎಂಬ ಪರಿಕಲ್ಪನೆಯ ಮೇಲೆ ಮಬ್ಬುಕವಿದಿದ್ದಾಗ ಅದನ್ನು ನಿವಾರಿಸಿ, ಸ್ಪಷ್ಟವಾದ ತಿಳಿವಳಿಕೆ ಬೆಳೆಸಲೆಂದು

ಏಷ್ಯಾದಲ್ಲಿ ಕ್ರಿಯಾನಿರತವಾಗಿದ್ದ ಬೇರಿನ ನೆಲೆಯ ಮಹಿಳಾ ಸಂಘಟನೆಗಳು ೧೯೯೨ರಲ್ಲಿ ಶ್ರೀಮತಿ ಶ್ರೀಲತಾ ಬಾಟ್ಲೀವಾಲಾ ಅವರನ್ನು ಆಹ್ವಾನಿಸಿ ದಕ್ಷಿಣ ಏಷ್ಯಾದಲ್ಲಿ ಸಬಲೀಕರಣವನ್ನು ಯಾವ ರೀತಿ ಅರ್ಥೈಸಲಾಗುತ್ತಿದೆ ಎಂಬುದನ್ನು ಸಂಶೋಧಿಸಿ ಅಧ್ಯಯನ ಮಾಡುವಂತೆ ಕೋರಿಕೊಂಡವು. ಈ ರೀತಿ ಮಹಿಳಾ ಸಬಲೀಕರಣವನ್ನೇ ಉದ್ದೇಶಿಸಿ ಶ್ರೀಲತಾ ನಡೆಸಿದ ಬೇರಿನ ನೆಲೆಯ ಸಮಗ್ರ ಅಧ್ಯಯನದ ಫಲವಾಗಿ Women's Empowerment in South Asia: Concepts and Practices ಎಂಬ ಗ್ರಂಥ ೧೯೯೩ರಲ್ಲಿ ಹೊರಬಂತು. ಸಬಲೀಕರಣ ಎನ್ನುವುದು 'ವ್ಯಕ್ತಿಗಳ ಮತ್ತು ಸಾಮಾಜಿಕ ಗುಂಪುಗಳ ನಡುವಿನ ಅಧಿಕಾರ ಸಂಬಂಧಗಳಲ್ಲಿ ಪರಿವರ್ತನೆ ತರುವ ಪ್ರಕ್ರಿಯೆ' ಎಂದು ಆ ಕೃತಿಯಲ್ಲಿ ಸ್ಪಷ್ಟವಾಗಿ ನಿರ್ವಚನವನ್ನು ನೀಡಿದ್ದು ಇಂಥ ಸಾಮಾಜಿಕವಾದ ಅಧಿಕಾರ ಪಲ್ಲಟವಾಗಲಿಕ್ಕೆ ಮೂರು ಮುಖ್ಯ ವಿಧಾನಗಳನ್ನು ಗುರುತಿಸಲಾಯಿತು:

೧) (ಲಿಂಗತ್ವ, ಜಾತಿ, ವರ್ಗ ಮುಂತಾದ) ಸಾಮಾಜಿಕ ಅಸಮಾನತೆಗಳಿಗೆ ಒತ್ತಾಸೆ ನೀಡುತ್ತಿರುವ ಎಲ್ಲ ತಾತ್ವಿಕತೆಗಳನ್ನು ಪ್ರಶ್ನಿಸುವುದರ ಮೂಲಕ.
೨) ಆರ್ಥಿಕ, ನೈಸರ್ಗಿಕ ಮತ್ತು ಬೌದ್ಧಿಕ ಆಕರಗಳಿಗೆ (ಮಹಿಳೆಯರು) ಪ್ರವೇಶ ಪಡೆಯಲು ಪ್ರಚಲಿತವಿರುವ ಚೌಕಟ್ಟುಗಳನ್ನು ಬದಲಾಯಿಸುವುದರ ಮೂಲಕ.
೩) ಈಗಿರುವಂಥ ಅಧಿಕಾರದ ಸಂರಚನೆಗಳನ್ನು [ಕುಟುಂಬ, ಸರ್ಕಾರ, ಮಾರುಕಟ್ಟೆ, ಶಿಕ್ಷಣ ಮತ್ತು ಮಾಧ್ಯಮಗಳನ್ನು] ಪರಿವರ್ತಿಸುವ ಮೂಲಕ.

ಶ್ರೀಲತಾ ಅವರ ಆ ಸಂಶೋಧನಾ ವರದಿಯು ತಾತ್ವಿಕ ಮತ್ತು ಸಾಮಾಜಿಕ ಬದಲಾವಣೆಗಳು ಸಬಲೀಕರಣವನ್ನು ಜೀವಂತವಾದ ಸಮಾಜ ಪರಿವರ್ತನೆಯ ಪ್ರಕ್ರಿಯೆಯಾಗಿ ಉಳಿದಿರುವಂತೆ ಮಾಡಬಲ್ಲ ಮುಖ್ಯ ಸಂಗತಿಗಳು ಎಂದು ದಾಖಲೆಗೊಳಿಸಿದೆ. ಅಧಿಕಾರದ ಯಾವುದೋ ಒಂದು ಅಂಶವನ್ನು–ಸಾಲದ ಸವಲತ್ತು, ಭೂಮಿಯ ಒಡೆತನದ ಹಕ್ಕು, ಆದಾಯ ಹೆಚ್ಚಳವೇ ಮುಂತಾಗಿ ಪರಿಹಾರ ದೊರಕಿಸಿ ಕೊಟ್ಟ ಮಾತ್ರಕ್ಕೆ ಮಹಿಳಾ ಸಬಲೀಕರಣವನ್ನು ಇಡಿಯಾಗಿ ಸಾಧಿಸಿದಂತೆ ಆಗುವುದಿಲ್ಲ ಎಂದು ಅಷ್ಟು ಹಿಂದೆಯೇ ಆ ವರದಿಯು ಒತ್ತುಕೊಟ್ಟು ಹೇಳಿತ್ತು. ಮಹಿಳಾ ಸಬಲೀಕರಣ ಎಂಬುದಕ್ಕೆ ಒಂದೇ ಏಟಿಗೆ ಗುರಿ ಸಾಧಿಸಬಲ್ಲ ಮಾಯಾಬುಲೆಟ್ ರೀತಿಯ ಯಾವುದೇ ದಾರಿ ಇಲ್ಲ. ಅದು ನಿಧಾನವಾಗಿ, ಸಮಗ್ರವಾಗಿ ಸಂಭವಿಸುವ ಅಧಿಕಾರದ ವ್ಯವಸ್ಥೆಯ ಪರಿವರ್ತನೆ–ಎಂಬ ಅರಿವು ಆ ಸಂಶೋಧಕರಿಗಿತ್ತು.

ಭಾರತ ಉಪಖಂಡದಲ್ಲಿ, ಅದರಲ್ಲೂ ಅಂಚಿನ ನೆಲೆಯಲ್ಲೇ ಉಳಿದಿರುವ ಸಮುದಾಯಗಳನ್ನು, ಗ್ರಾಮಗಳಲ್ಲಿನ ಹಾಗೂ ನಗರಗಳಲ್ಲಿನ ಬಡ ಮಹಿಳೆಯರನ್ನು ಸಬಲಗೊಳಿಸಲು ನಡೆಸಲಾಗುತ್ತಿದ್ದ ಕಾರ್ಯಪ್ರಯೋಗಗಳ ಅನೇಕ ನಿಟ್ಟಿನ ಅನುಭವಗಳು ಮೇಲೆ ಹೇಳಿದ ರೀತಿ ಸಬಲೀಕರಣವೆಂಬ ತಾತ್ವಿಕ ಪರಿಕಲ್ಪನೆಯನ್ನು ಬೆಳೆಸಲು ಆಧಾರವಾಗಿದ್ದವು. ಮೊದಲಿಗೆ ಸ್ವಾಯತ್ತ ಮಹಿಳಾ ಸಂಘಟನೆಗಳು ಮಹಿಳೆಯರನ್ನು ಸೇವಾ ಉಪಭೋಗಿಗಳು, ಉತ್ಪಾದಕರು, ದುಡಿಮೆಗಾರರು ಎಂದು ಭಿನ್ನರೀತಿಗಳಿಂದ ಪರಿಗಣಿಸಿ ಸರ್ಕಾರಿ ಕಾರ್ಯ ಯೋಜನೆಗಳ ನಡುವೆ ಪ್ರವೇಶಿಸಿ, ಅವುಗಳ ಫಲ ಇವರಿಗೆ ದೊರಕುವಂತೆ ಮಾಡುವ ವಿಧಾನಗಳನ್ನು ಅನುಸರಿಸುತ್ತಿದ್ದವು. ಸ್ತ್ರೀವಾದದ ಜನಪ್ರಿಯ ಶೈಕ್ಷಣಿಕ ಕ್ರಿಯಾ ತಂತ್ರಗಳನ್ನು ಅಳವಡಿಸಿಕೊಂಡು ಬಡತನ, ಪ್ರತ್ಯೇಕತೆ, ತಾರತಮ್ಯಗಳ ಅನುಭವಗಳನ್ನು ಪರಸ್ಪರ ಹಂಚಿಕೊಳ್ಳುವ ಮೂಲಕ ಮಹಿಳೆಯರು ಒಂದು ಸಮೂಹದ ನೆಲೆಯನ್ನು ಪಡೆದುಕೊಳ್ಳಬಲ್ಲ ಹೊಸ ಸ್ಪೇಸ್‌ಗಳನ್ನು ಅವು ನಿರ್ಮಿಸುತ್ತಿದ್ದವು. ಮಹಿಳಾ ಶೋಷಣೆಗಳನ್ನೇ ಬಲಗೊಳಿಸಿ ಕಾಯ್ದಿಡುವ ತತ್ತ್ವಸಿದ್ಧಾಂತಗಳನ್ನೂ ಸಂರಚನೆಗಳನ್ನೂ ಕಟುವಾಗಿ ವಿಮರ್ಶಿಸಿ, ವಿಶ್ಲೇಷಣೆಗೆ ಒಳಗು ಮಾಡುತ್ತಿದ್ದವು. ತಮ್ಮ ಅಧೀನ ನೆಲೆಯನ್ನು ಮಹಿಳೆಯರು ಹೇಗೆ ಅನುಭವಿಸುತ್ತಿದ್ದಾರೆಂಬ ಬಗ್ಗೆ ಪ್ರಜ್ಞಾ–ಜಾಗೃತಿಗೆ ಯತ್ನ ಮಾಡಲಾಗುತ್ತಿತ್ತು. ಈ ಎಲ್ಲಾ ಪ್ರಕ್ರಿಯೆಗಳ ಮುಖ್ಯ ಬಂಡವಾಳವೆಂದು ಹೊಸ ತಾತ್ವಿಕ ವಿಚಾರ, ಮಾಹಿತಿಗಳನ್ನು ಪರಿಗಣಿಸಲಾಗಿತ್ತೇ ವಿನಾ, ಮಹಿಳೆಯರ ಕೈಗೊಪ್ಪಿಸಬಹುದಾದ ಸೇವೆಗಳೆಂದಲ್ಲ. ತಾವು ಬಯಸುತ್ತಿದ್ದ ಪರಿವರ್ತನೆಗಳನ್ನು ಕಾರ್ಯಗತಗೊಳಿಸುವುದಕ್ಕಾಗಿ ಅವುಗಳನ್ನು ಪತ್ತೆ ಹಚ್ಚಿ, ಬೆಳಕಿಗೆ ತಂದು ಅವುಗಳಿಗಾಗಿ ಹೊಸ ಕಾರ್ಯತಂತ್ರ ಸೃಷ್ಟಿಸಿಕೊಳ್ಳಲು ಅಗತ್ಯವಾದ ಸ್ಪೇಸ್ ಅನ್ನು ಸೃಷ್ಟಿಸುವುದೇ ಸ್ವಾಯತ್ತ ಮಹಿಳಾ ಸಂಘಟನೆಗಳ ಅಂದಿನ ಮುಖ್ಯ ಗುರಿಯಾಗಿತ್ತು. ಆದರೆ ತೊಂಬತ್ತರ ದಶಕದ ಹೊತ್ತಿಗೆ ಪ್ರಚಾರ ಪಡೆಯತೊಡಗಿದ್ದ ಮಹಿಳಾ ಸಬಲೀಕರಣದ ಪ್ರಯೋಗಗಳು ಆ ಮುಂಚೆ ಇದ್ದ ತಾತ್ವಿಕ ಆಶಯದಿಂದ ಬಹುದೂರ ಸರಿದಿದ್ದವು.

ಈಗ ಹಿಂದಿರುಗಿ ನೋಡಿದಲ್ಲಿ, ಸಬಲೀಕರಣದ ಆರಂಭಕಾಲದ ಪ್ರಯತ್ನಗಳು ಎಷ್ಟರ ಮಟ್ಟಿಗೆ ಸಫಲವಾಗಿದ್ದವೆಂಬುದನ್ನು ಅಳೆಯಲು ತುಂಬ ಕಳಕಳಿ ಇಂದು ಕಂಡುಬರುತ್ತಿದೆ. ಹಿಂದಿನ ಯತ್ನಗಳ ಪರಿಣಾಮಗಳು ಹೊರಗೆ ವ್ಯಕ್ತವಾಗಲು ದೀರ್ಘಕಾಲವೇ ಹಿಡಿಯಿತು ಎಂಬುದಲ್ಲದೆ ಬೇರೆ ಬಗೆಯ ಆತಂಕಗಳೂ ವ್ಯಕ್ತವಾಗುತ್ತಿವೆ. ಹೀಗಿದ್ದರೂ ಹಿಂದೆ ನಡೆದ ಯತ್ನಗಳ ಅಷ್ಟಿಷ್ಟು ಸಫಲತೆಯನ್ನೇ ಒಂದು ಉಪಕರಣವೆಂದು ಬಳಸಿಕೊಳ್ಳುವಂಥ ಉಪೇಕ್ಷೆಯ ಪರಿಣಾಮವನ್ನಂತೂ ಅದು ಉಂಟುಮಾಡಿತು. ಇದರಿಂದ Empowerment ಅನ್ನು ಒಂದು ರೀತಿಯಲ್ಲಿ ಬಡತನ ನಿರ್ಮೂಲನಕ್ಕೆ, ವೇಗದ ಆರ್ಥಿಕ ಅಭಿವೃದ್ಧಿಗೆ ಒದಗುವ ಮಾಯಾಬುಲೆಟ್ ರೀತಿ ಬಳಸುವುದು ರೂಢಿಗೊಂಡಿತು. ಬಹುಮುಖಿಯಾದ ಸಾಮಾಜಿಕ ಪರಿವರ್ತನೆ, ಅದರಲ್ಲೂ ಮುಖ್ಯವಾಗಿ ಲಿಂಗತ್ವ ಸಮಾನತೆ ಸಾಧಿಸಬಲ್ಲ ಕಾರ್ಯತಂತ್ರ ಅದು ಎಂಬ ಅರ್ಥವೇ ಕಳೆದುಹೋಯಿತು. ಬದಲಾಗಿ ದಾನಿಗಳು, ದಾನಿ ಸಂಸ್ಥೆಗಳು ಧಾರಾಳವಾಗಿ ಸಹಾಯಧನ ನೀಡುತ್ತಾ ದೊಡ್ಡ ಹಾಗೂ ಕಿರಿಯ ಪ್ರಮಾಣದ ಕಾರ್ಯ ಯೋಜನೆಗಳನ್ನು ಜಾರಿಗೊಳಿಸಿ ಅದನ್ನೇ ಸಬಲೀಕರಣವೆಂದು ಕರೆಯಲಾರಂಭಿಸಿದವು. ಎಂಬತ್ತರ ದಶಕದಲ್ಲಿ ಸ್ತ್ರೀವಾದಿಗಳು ಪ್ರತಿಪಾದಿಸುತ್ತಿದ್ದ ಅಭಿವೃದ್ಧಿ ಕುರಿತ ರಾಜಕೀಯ ಕ್ರಿಯಾಸಿದ್ಧಾಂತವನ್ನು ಪೂರ್ತಿಯಾಗಿ ಕೈಬಿಡಲಾಗಿದೆ. ಇದರಿಂದ

*ಶ್ರೀಮತಿ ಶ್ರೀಲತಾ ಬಾಟ್ಲೀವಾಲ– ಒಬ್ಬ ಭಾರತೀಯ ಸ್ತ್ರೀವಾದಿ ಹೋರಾಟಗಾರ್ತಿ. ಈಗ ಅವರು ಹಾರ್ವರ್ಡ್ ವಿಶ್ವವಿದ್ಯಾಲಯದಲ್ಲಿ Hausen Centre for Non-profitable Organisations ಎಂಬ ಕೇಂದ್ರದಲ್ಲಿ Civil Society Research Fellow ಆಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಅವರು ದಕ್ಷಿಣ ಏಷ್ಯಾದ ಬೇರಿನ ನೆಲೆಯ ಮಹಿಳೆಯರ ಸಬಲೀಕರಣದ ಬಗ್ಗೆ ಮಾಡಿದ ಸಂಶೋಧನೆಯ ವರದಿ ಮತ್ತು ವಿಶ್ಲೇಷಣೆಗಳನ್ನು ಒಳಗೊಂಡ ಗ್ರಂಥ Women's Empowerment in South Asia : Concepts and Practices 1993ರಲ್ಲಿ ಪ್ರಕಾಶಿತವಾಯಿತು. ಇಂಟರ್‌ನೆಟ್‌ನ open democracy ಎಂಬ ವೆಬ್‌ಸೈಟ್‌ಗಾಗಿ ಅವರು ಬರೆದ ಲೇಖನ 'Putting power back into Empowerment' ಎಂಬುದರ ವಿಚಾರಗಳ ಸಂಗ್ರಹಾನುವಾದ ಇಲ್ಲಿ ಮಾಡಲಾಗಿದೆ.*

ಹಿಂದಿದ್ದ ಸ್ತ್ರೀವಾದಿ ದೃಷ್ಟಿಯ ಮಹಿಳಾ ಸಬಲೀಕರಣದ ಆಚರಣೆಗಳ ಸಳಹದಿಯೇ ಕುಸಿಯತೊಡಗಿದೆ. ನವ ಉದಾರವಾದಿ ಆರ್ಥಿಕತೆ, ಅದರ ಕೊಳ್ಳುಬಾಕ ಸಂಸ್ಕೃತಿಯೇ ಪ್ರಬಲವಾಗಿ ಆಳುತ್ತಿರುವ ಇಂದಿನ ಪರಿಸ್ಥಿತಿಯಲ್ಲಿ ಮಹಿಳಾ ಸಬಲೀಕರಣ ಎನ್ನುವುದು ಸಾಮಾಜಿಕ ವ್ಯವಸ್ಥೆಯ ಬದಲಾವಣೆಗೆ ಬದಲಾಗಿ ಬಿಡಿ ವ್ಯಕ್ತಿಗಳ ವೈಯಕ್ತಿಕ ಅಧಿಕಾರ, ಸಾಧನೆ, ಸ್ಥಾನಮಾನಗಳ ಜಾಗಕ್ಕೆ ಇಳಿಸಲ್ಪಟ್ಟಿದೆ. ಪ್ರಗತಿಯ ಮಾಯಾ ಬುಲೆಟ್ಟುಗಳೂ, ಯಾಂತ್ರಿಕ ಪರಿಹಾರಗಳೂ ವಿಜೃಂಭಿಸುತ್ತಿದ್ದು ಸಾಮಾಜಿಕ ನ್ಯಾಯದ ಮೂಲಭೂತ ಪ್ರಕ್ರಿಯೆಗಳೆಲ್ಲವನ್ನು ಅವು ಇಂದು ಗುಡಿಸಿಹಾಕುತ್ತಿವೆ. ಈ ಸ್ಥಿತಿಯಲ್ಲಿ ಮಹಿಳಾ ಸಬಲೀಕರಣ ಎಂಬ ಶಬ್ದವನ್ನು, ಅದರ ಹಿಂದಿದ್ದ ವಿಶಾಲವಾದ ಸೈದ್ಧಾಂತಿಕ ಅರ್ಥದೊಂದಿಗೆ ಮತ್ತೆ ಒಗ್ಗೂಡಿಸುವುದು ಅವಶ್ಯಕವಾಗಿದೆ. ಈ ರೀತಿ ಸಬಲೀಕರಣಕ್ಕೆ ಬಲಗೊಡಬೇಕಾದರೆ ಮೂರು ಮುಖ್ಯ ಅವಶ್ಯಕ ಅಂಶಗಳು ಬೇಕಾಗುತ್ತವೆ. ಅವುಗಳೆಂದರೆ:

೧) ಸಬಲೀಕರಣ ಮತ್ತು ಮುಖ್ಯವಾಹಿನಿಯ ಡಿಸ್ಕೋರ್ಸ್‌ಗಳಲ್ಲಿ ಅಂಚಿಗೆ ತಳ್ಳಲ್ಪಟ್ಟಿರುವ ತಾತ್ವಿಕ ನೆಲೆಯ ಸ್ಪೇಸ್‌ಗಳನ್ನು ಸೃಷ್ಟಿಸಿಕೊಳ್ಳುವುದು. ಆರ್ಥಿಕನ್ಯಾಯ, ಪರಿಸರ, ಮಾನವ ಹಕ್ಕುಗಳು ಮುಂತಾದ ಎಲ್ಲೆಲ್ಲಿ ಲಿಂಗತ್ವವನ್ನು ಗೌಣವಾಗಿಸಲಾಗುತ್ತಿದೆಯೋ ಅವೆಲ್ಲದಕ್ಕೂ ಸ್ಪೇಸ್ ಅನ್ನು ಈ ಎಲ್ಲಾ ಅಜೆಂಡಾಗಳಲ್ಲಿ ಕಲ್ಪಿಸಲಿಕ್ಕಾಗಿ ನಾವು ಹಕ್ಕೊತ್ತಾಯಿಸಬೇಕು.

೨) ನಮ್ಮ ತಾತ್ವಿಕದರ್ಶನಗಳನ್ನೂ ಕಾರ್ಯತಂತ್ರಗಳನ್ನೂ ಸಮಕಾಲೀನ ಸವಾಲುಗಳಿಗೆ ತಕ್ಕಂತೆ ಪುನಾರೂಪಿಸಿಕೊಳ್ಳಬೇಕು. ಜಾಗತೀಕರಣ, ಬಹುವಿಧಾನಗಳ ಮತ್ತು ದ್ವಿ–ಪಕ್ಷೀಯವಾದ ಆರ್ಥಿಕ ಹಾಗೂ ನೀತಿ ನಿರ್ಮಾಣದ ಅಧಿಕಾರಗಳನ್ನು ಬದಲಾಯಿಸಬಲ್ಲ ರೀತಿಯಲ್ಲಿ ಈ ಕಾರ್ಯತಂತ್ರಗಳ ಪುನಾರಚನೆ ಇರಬೇಕು. ಇದಕ್ಕೆ ಹೊಸ ವಿಶ್ಲೇಷಣಾ ವಿಧಾನಗಳೂ, ಹೊಸ ಚೌಕಟ್ಟುಗಳೂ ಕಾರ್ಯವಿಧಾನಗಳೂ ಅವಶ್ಯಕ.

೩) ಜಾಗತೀಕರಣದ ಹಲವು ಪ್ರಕ್ರಿಯೆಗಳು, ಮೂಲಭೂತವಾದಿ ರಾಜಕಾರಣ ನೀತಿಗಳು, ಮಿಲಿಟರೀಕರಣ, ನವ ಉದಾರವಾದಿ ಆರ್ಥಿಕ ಸೂತ್ರಗಳೆಲ್ಲವೂ ಬಡ ಮಹಿಳೆಯರನ್ನು ಅನೇಕ ಬಗೆಗಳಿಂದ ಇನ್ನಷ್ಟು ಬಡವರನ್ನಾಗಿಸಿವೆ; ಅವರ ಮೇಲೆ ಹಿಂಸಾಚಾರ ನಡೆಸಿವೆ; ಅವರ ಸ್ಥಾನಪಲ್ಲಟಮಾಡಿ ನೂರಾರು ರೀತಿ ಅಧೀನ ನೆಲೆಗಳಿಗೆ ಅವರನ್ನು ತಳ್ಳುತ್ತಿವೆ. ಇವೆಲ್ಲದರ ವಿರುದ್ಧವಾಗಿ ಕ್ರಿಯಾತ್ಮಕವಾಗಿ ನಾವೀಗ ಪ್ರತಿಭಟಿಸಬೇಕಾಗಿದೆ.

ವರ್ತಮಾನದ ಆಕ್ರಮಣಶಾಹಿ ಆರ್ಥಿಕ ವ್ಯವಸ್ಥೆಯಲ್ಲಿ ಸ್ತ್ರೀವಾದಿಗಳು ಎಲ್ಲದರಿಂದ ದೂರವಾಗಿ ಸೋತಹಾಗೆ ಹಿಂಜರಿದಿರುವಂತೆ ತೋರುತ್ತಿದ್ದಾರೆ. ಅವರ ಚಳವಳಿಗೆ ಎದುರಾಗಿರುವ ಸವಾಲು ಇದಾಗಿದೆ– ಇದೊಂದು ಚಾರಿತ್ರಿಕವಾದ ಗತಿತಾರ್ಕಿಕ ಪ್ರಕ್ರಿಯೆ ನಮ್ಮೆದುರಿಗೆ ಜರುಗುತ್ತಿದೆ. ನಮ್ಮ ಧ್ವನಿಗಳು ಹಿಂದೊಮ್ಮೆ ತಾರಕಕ್ಕೇರಿ ಹಕ್ಕೊತ್ತಾಯಿಸಲು ಶಕ್ತವಾಗಿದ್ದವು. ಆದರೆ ಆ ಹಕ್ಕೊತ್ತಾಯ ಶಕ್ತಿಯನ್ನೇ ಸರ್ಕಾರಗಳೂ, ರಾಜಕೀಯಾದಿ ಇತರ ಏಜೆನ್ಸಿಗಳೂ Co-opt ಮಾಡಿಕೊಂಡುಬಿಟ್ಟಿವೆ. ಹೀಗಾಗಿ ಹಕ್ಕೊತ್ತಾಯಿಸುವಿಕೆಯೇ ಒಂದು ಯಾಂತ್ರಿಕ ವಿಧಿಯಾಗಿ ಹೋಗಿದೆ. ಲಿಂಗತ್ವ ಮತ್ತು ಸಮಾಜದ ಶ್ರೇಣೀಕೃತ ಅಧಿಕಾರದೊಳಗೆ ಆಳವಾದ ತೀವ್ರವಾದ ಬದಲಾವಣೆ ಉಂಟುಮಾಡಬಲ್ಲ ಶಕ್ತಿಮೂಲಗಳನ್ನೇ ದುರ್ಬಲಗೊಳಿಸಲು ಇಲ್ಲವೆ ಹಿಂದೆಗೆಯುವಂತೆ ಈ ಚಾರಿತ್ರಿಕ ಘಟ್ಟವು ಹವಣಿಸುತ್ತಿದೆ ಎಂಬುದನ್ನು ನಾವೀಗ ಅರ್ಥಮಾಡಿಕೊಳ್ಳಬೇಕಾಗಿದೆ. ನಾವೆಲ್ಲ ಹೊಸ ನಿಟ್ಟಿನಿಂದ ಸಂಘಟಿತವಾಗಿ ಗತಿತಾರ್ಕಿಕವಾಗಿ ಸ್ಪಂದಿಸಬೇಕಾದ ಕಾಲ ಈಗ ಬಂದಿದೆ. ಇವತ್ತಿನ ಈ ಸವಾಲನ್ನು ಎದುರಿಸಲು ನಾವು ಸಿದ್ಧವಾಗದಿದ್ದರೆ ನಮ್ಮ ಚಳವಳಿ ಕೇವಲ ತರಗೆಲೆಯಾಗಿಬಿಡಬಹುದು.

ಈ ಅವಸ್ಥಾಂತರ ಅಲ್ಪಕಾಲದ್ದು, ಅದು ಕೇವಲ ಒಂದು ಅವಕಾಶ. ಅದು ನಮ್ಮನ್ನು ಮತ್ತೆ ಚಳವಳಿಗೆ ಹಿಂದಿರುಗುವಂತೆ ಸವಾಲೆಸೆಯುತ್ತಿದೆ. ನಾವೀಗ ಹಿಂದಿಗಿಂತ ಹೆಚ್ಚು ಶಕ್ತಿಯುತವಾದ ಕಾರ್ಯತಂತ್ರಗಳ ಮೂಲಕ ಇನ್ನೂ ಹರಿತವೂ ಅರ್ಥಪೂರ್ಣವೂ ಆದ ಚರ್ಚೆಗಳ ಮುಖಾಂತರ ಕಳೆದ ದಶಕಗಳ ಅನುಭವಗಳಿಂದ ಪಾಠ ಕಲಿತು ಹೊಸ ವಿಚಾರಗಳನ್ನು, ಹೊಸ ಕಾರ್ಯ ವಿಧಾನಗಳನ್ನೂ ಮುಂದೆ ತರುವ ಯತ್ನಮಾಡಬೇಕಾಗಿದೆ.



ಯಾವ ಮಹಿಳಾ ಸಮೂಹದ ಸಂಘಟಿತ ರೂಪಕ್ಕೆ ಚಳವಳಿ ಎಂದು ನಾವು ಕರೆದೆವೋ ಅದು ಈಗ ದಾನ, ಸಹಾಯಧನ ನೀಡುವ ಸಂಘ–ಸಂಸ್ಥೆಗಳು, ಸರ್ಕಾರಗಳ ಮೇಲೆ ಅವಲಂಬಿತವಾಗಿ ಹೋಗಿವೆ. ಹಿಂದೆ ಸ್ತ್ರೀಯರನ್ನು ಚಲನಶೀಲಗೊಳಿಸುವ, ಅವರಲ್ಲಿ ಪ್ರಜ್ಞೆಯ ಕಿಡಿ ಹೊತ್ತಿಸುವ ಜನಪ್ರಿಯ ಕ್ರಿಯಾವಿಧಾನವು ನಮ್ಮೆಲ್ಲ ಶಕ್ತಿಯ ಆಕರವಾಗಿತ್ತು. ಆ ಶಕ್ತಿಯ ಮೂಲಕ್ಕೆ ನಾವೀಗ ಹಿಂದಿರುಗಬೇಕು. ತಾಂತ್ರಿಕ ತಜ್ಞತೆಯನ್ನು ಎತ್ತಿಹಿಡಿಯುತ್ತಾ ನೈತಿಕದೃಷ್ಟಿಯ ಕಾರ್ಯಗಳಿಗೆ ನಾವು ಹೋರಾಟ ಶಕ್ತಿಯನ್ನು ಬಿಟ್ಟುಕೊಟ್ಟಂತಾಗಿದೆ. ಆ ಜಾಗದಲ್ಲಿ ಈಗ ಪ್ರತಿಗಾಮಿ ಶಕ್ತಿಗಳು ವಿಜೃಂಭಿಸುತ್ತಿವೆ. ಕಳೆದ ಇಪ್ಪತ್ತು ವರ್ಷಗಳಿಂದ ಸಾವಿರಾರು

ಜನರು, ಮಹಿಳೆಯರಿಗಾಗಿ ಸಂಘಟಿತ ಹೋರಾಟಗಳನ್ನು ನಡೆಸುತ್ತಿದ್ದ ಜಾಗದಲ್ಲಿ ಈಗ ಹಿಮ್ಮುಖ ರಾಜಕೀಯ ಅಜೆಂಡಾಗಳು ಝುಂಡಾ ಹಾರಿಸುತ್ತಿವೆ. ಆದ್ದರಿಂದ ನಾವು (ಈ ಹಿಂಜರಿತವನ್ನು ಪ್ರತಿರೋಧಿಸ ಬಲ್ಲ) ಬಲವಾಗಿ ಆಗ್ರಹಿಸಬಲ್ಲ, ತುಂಬ ಶಕ್ತಿಯುಳ್ಳ ಹೊಸ ತಾತ್ವಿಕ ನೋಟಗಳನ್ನು ಸಂದೇಶಗಳಾಗಿಸಿ ಬಡ ಮಹಿಳೆಯರಿಗೂ ಪುರುಷರಿಗೂ ತಲುಪಿಸುವ ರೀತಿ ಪುನರುಚ್ಚರಿಸಬೇಕಾಗಿದೆ. ಈ ಕ್ರಿಯಾ ವಿಧಾನವು ಸ್ಥಳೀಯ, ರಾಷ್ಟ್ರೀಯ ಮತ್ತು ಜಾಗತಿಕ ಮಟ್ಟಗಳಲ್ಲಿ ಸಾಧ್ಯವಾಗಬೇಕಾಗಿದೆ.

ಬಡಮಹಿಳೆಯರನ್ನೂ ಅವರ ಚಳವಳಿ ಹೋರಾಟಗಳನ್ನೂ ಆಲಿಸಲು ನಾವು ದಶಕಗಳ ಹಿಂದಕ್ಕೆ ಸರಿಯಬೇಕು. ಆ ಮಹಿಳೆಯರ ಮೌಲ್ಯಗಳು, ತತ್ವಗಳು, ಕ್ರಿಯೆಗಳು ಮತ್ತು ನ್ಯಾಯಕ್ಕಾಗಿ ಅವರು ನಡೆಸಿರುವ ಹುಡುಕಾಟಗಳಿಂದ ನಾವೀಗ ಕಲಿಯಬೇಕಾಗಿದೆ. ನೈಜವಾದ ಜಾಗತಿಕ ಸ್ತ್ರೀವಾದಿ ಚಳವಳಿಗಳ ಆಳವಾದ ಮಾದರಿಗಳನ್ನು ಈಗ ಕಟ್ಟಬೇಕಿದೆ. ನಮ್ಮ ಈ ಹೋರಾಟದ ತಾತ್ವಿಕತೆಯು ಪುನಃ ಪಡೆಯುವಿಕೆ, ಮರುರೂಪಿಸುವಿಕೆ, ಮತ್ತು ಪ್ರತಿರೋಧಿಸುವಿಕೆ [Reclaiming, Reframing & Resistance] ಎಂಬ ಮೂರು ಕ್ರಿಯೆಗಳನ್ನು ಅಪೇಕ್ಷಿಸುತ್ತಿದೆ.

ಕಳೆದ ಇಪ್ಪತ್ತು ವರ್ಷಗಳ ಅನುಭವವು ನಮಗೆ ಒಂದು ಪಾಠ ವನ್ನಂತೂ ಚೆನ್ನಾಗಿ ಕಲಿಸಿದೆ. ಜೀವಶಾಸ್ತ್ರೀಯವಾಗಿ ಹೆಣ್ಣಾಗಿರುವವ ರೆಲ್ಲರೂ ಜೆಂಡರ್ ಸಮಾನತೆಗೆ ಬದ್ಧರಾಗಿ ಸಾಮಾಜಿಕ ನ್ಯಾಯಕ್ಕೆ ಬದ್ಧರೂ ಆಗಿರುತ್ತಾರೆಂದು ಕಲ್ಪಿಸಬಾರದೆಂಬುದೇ ಆ ಪಾಠ, ಲಿಂಗತ್ವ, ಅಧಿಕಾರವ್ಯವಸ್ಥೆ ಮತ್ತು ಜಗತ್ತನ್ನು ರಾಜಕೀಯವಾಗಿ ಪರಿವರ್ತಿಸುವ ತತ್ತ್ವಗಳಲ್ಲಿ ನಂಬಿಕೆಯಿಟ್ಟಿರುವ ಸ್ತ್ರೀವಾದಿಗಳಿಗೆ ಪಿತೃಸಂಸ್ಕೃತಿಯ ರಾಜಕೀಯ, ಅದರ ಅಧಿಕಾರದ ಸಂಕೀರ್ಣ ಸ್ವರೂಪ. ಮತ್ತೆ ಅಧಿಕಾರ ಗಳಿಸಿಕೊಳ್ಳುವ ಬಗೆ, ಒಳಗೇ ಅದು ದ್ರೋಹ ಬಗೆವ ರೀತಿಗಳ ಅರಿವು ಚೆನ್ನಾಗಿಯೇ ಉಂಟಾಗಿದೆ. ಆ ವ್ಯವಸ್ಥೆ ತನಗೆ ಸವಾಲಾಗುವಂಥ ಶಕ್ತಿಗಳನ್ನು ಹೇಗೆ ಬಗ್ಗುಬಡಿಯುತ್ತದೆ ಎಂಬುದನ್ನು ಅವರು ಅರ್ಥಮಾಡಿ ಕೊಂಡಿದ್ದಾರೆ. ಅಧಿಕಾರ ವ್ಯವಸ್ಥೆಯನ್ನು ನಾವು ಪಲ್ಲಟಗೊಳಿಸುವುದಕ್ಕಿಂತ ಹೆಚ್ಚು ಸುಲಭವಾಗಿ ಅದೇ ನಮ್ಮನ್ನು ಬದಲಾಯಿಸಿಬಿಡಬಲ್ಲದು ಎಂಬ ಪಾಠ ನಾವು ಕಲಿತಿದ್ದೇವೆ. ನಮ್ಮ ಈ ಮುಂಚಿನ ಗ್ರಹಿಕೆಗಳು, ಊಹೆಗಳೆಲ್ಲವೂ ಪರೀಕ್ಷೆಗೆ ಒಳಗಾಗಿದ್ದು ಅವು ಕೇವಲ ಪಾರ್ಶ್ವಿಕ ಸತ್ಯಗಳು ಎಂಬುದು ಈಗ ಅರಿವಾಗಿದೆ.

ಹೀಗೆಂದಾಗ ಮಹಿಳೆಯರಿಗೆ ರಾಜಕೀಯ ಘಟಕಗಳಲ್ಲಿ ಹೆಚ್ಚು ಪ್ರಾತಿನಿಧ್ಯ ಬೇಕೆಂಬ ಹಕ್ಕೊತ್ತಾಯವನ್ನು ನಾವು ಕೈಬಿಡುತ್ತೇವೆ ಎಂದಾಗಲೀ, ನಮ್ಮದೇ ಸಾಧನೆಗಳನ್ನು ನಿರಾಕರಿಸುತ್ತೇವೆ ಎಂದಾಗಲೀ ಅರ್ಥವಲ್ಲ. ಆದರೆ ನಾವು ಗುರುತಿಸಬೇಕಾದ ಸತ್ಯ ಎಂದರೆ ಮಹಿಳಾ ಪ್ರಾತಿನಿಧ್ಯದ ಹೆಚ್ಚಳ ಅವಶ್ಯಕವಾಗಿದ್ದರೂ ತನ್ನಷ್ಟಕ್ಕೇ ಅದು ರಾಜಕೀಯ ವನ್ನಾಗಲೀ, ಅಧಿಕಾರದ ಸ್ವರೂಪವನ್ನಾಗಲಿ ಪರಿವರ್ತಿಸುವಷ್ಟು ಬಲವಾಗಿಲ್ಲ ಎಂಬುದು. ಈಗ ನಾವಿರುವ ಚಾರಿತ್ರಿಕ ಘಟ್ಟ ಹೇಗಿದೆ ಎಂದರೆ ಕಳೆದ ದಶಕಗಳಲ್ಲಿ ನಾವು ಗಳಿಸಿರುವ ತಿಳಿವಳಿಕೆ ಹಾಗೂ ಒಳನೋಟಗಳ ತಳಹದಿಯ ಮೇಲೆ ನಮ್ಮ ತಾತ್ವಿಕ ವಿಚಾರವನ್ನು ಎರಕಹೊಯ್ಯಬೇಕಾಗಿದೆ. ೨೦೦೧ರ ಸೆಪ್ಟೆಂಬರ್ ಹನ್ನೊಂದನೆಯ ತಾರೀಖಿನಂದು ನಡೆದ ಘಟನೆಯ [ಜಗತ್ತಿನ ಎರಡು ಅತ್ಯಂತ ಎತ್ತರದ ಬಹುಮಹಡಿ ಗೋಪುರಗಳೂ ನೆಲಸಮವಾದ] ನಂತರ ಮಹಿಳೆಯರು, ಶಾಂತಿ, ಸಹನೆ, ಸಮಾನತೆ ಬಹುಮುಖತ್ವ ಹಾಗೂ ಉಳಿಸಿಡಬಲ್ಲ ಜಾಗತಿಕ ಅಭಿವೃದ್ಧಿಗಳ ವಿಚಾರಕ್ಕೆ ಬದ್ಧರಾಗಿರುವ ಎಲ್ಲರೂ ಸ್ಥಳೀಯ, ರಾಷ್ಟ್ರೀಯ ಮತ್ತು ಜಾಗತಿಕ ರಾಜಕೀಯದಲ್ಲಿ ಇನ್ನೂ ಹೆಚ್ಚಿನ ಧ್ವನಿ ಪಡೆದುಕೊಳ್ಳುವುದು ಹಿಂದೆಂದಿಗಿಂತ ಅತಿ ಹೆಚ್ಚು ತುರ್ತಿನದಾಗಿದೆ.

ಲಿಂಗತ್ವ ವ್ಯವಸ್ಥೆಯಲ್ಲಿ ರೂಢವಾಗಿರುವ ಸಾಮಾಜಿಕ ಅಧಿಕಾರ ಮತ್ತು ರಾಜಕೀಯ ಎಂಬುದರ ಸ್ವರೂಪ ಹೇಗಿದೆ ಎಂಬುದನ್ನು ಸ್ಪಷ್ಟವಾಗಿ ಅಭಿವ್ಯಕ್ತಗೊಳಿಸಲು ನಾವು ಶಕ್ತರಾಗದ ಹೊರತು ಅವುಗಳಲ್ಲಿ ಬದಲಾವಣೆ ಎಂಬುದು ಕಠಿಣಕಾರ್ಯವೇ ಆಗಿರುತ್ತದೆ. ಸ್ತ್ರೀವಾದಿ ಮಹಿಳೆಯರು ಜಗತ್ತಿನ ಎಲ್ಲ ಕಡೆಯು ಈ ವಾಸ್ತವವನ್ನು ಚೆನ್ನಾಗಿ ಅರ್ಥಮಾಡಿಕೊಂಡಿದ್ದಾರೆ. ಆದರೆ ಅಜ್ಞಾನವನ್ನು ನಿರ್ಮೂಲನಗೊಳಿಸು ವುದಕ್ಕಾಗಿ ಈ ಅರಿವನ್ನು ವ್ಯವಸ್ಥಿತ ಮಾನದಂಡವಾಗಿ ಬದಲಾಯಿಸಲು ಬೇಕಾದ ಕ್ರಿಯಾಮಾದರಿಗಳೂ, ಕಾರ್ಯತಂತ್ರಗಳೂ ಈಗ ದಾರಿ ಇಲ್ಲದಂತಾಗಿವೆ. ಈ ಸ್ಥಿತಿಯನ್ನು ಬದಲಿಸಲು ಅವಶ್ಯಕವಾಗಿರುವ ಸಂಗತಿಗಳನ್ನು ಹೀಗೆ ಗುರುತಿಸಬಹುದು:

೧) ಲಿಂಗತ್ವ ಹಾಗೂ ಸಾರ್ವಜನಿಕ ಅಧಿಕಾರವನ್ನು ಕುರಿತ ಕಾರ್ಯ ತಂತ್ರವನ್ನು ಒಳಗೊಂಡ ಒಳನೋಟಗಳನ್ನೂ, ಜ್ಞಾನವನ್ನೂ ಸೇರಿಸಿ ತೀಕ್ಷ್ಣಗೊಳಿಸಿ ಹೊಮ್ಮಿಬರಲು ನೆರವಾಗುವುದು.

೨) ರಾಜಕೀಯದಲ್ಲಿ ಇರುವ ಮಹಿಳೆಯರು ಸಾರ್ವಜನಿಕ ಅಧಿಕಾರ, ಸಾರ್ವಜನಿಕ ನೀತಿ ಹಾಗೂ ಸಂಸ್ಕೃತಿಯ ಮೇಲೆ ಬೀರಿರುವ ಪರಿಣಾಮಗಳನ್ನು ಅಂದಾಜು ಮಾಡಲು ಅಗತ್ಯವಾದ ಮಾನದಂಡಗಳ ಸರಣಿಯನ್ನು ಸೃಷ್ಟಿಸುವುದು.

೩) ಆ ರೀತಿ ಪರಿಣಾಮ ಬೀರುವಂತಹ ಮಾಹಿತಿ, ಡೇಟಾಗಳನ್ನು ಉತ್ಪಾದಿಸುವುದು.

೪) ಮಹಿಳೆಯರ ರಾಜಕೀಯ ಸಬಲೀಕರಣ ಹಾಗೂ ಸಾರ್ವಜನಿಕ ಅಧಿಕಾರಕ್ಕೆ ಸಂಬಂಧಿಸಿದ ರಾಷ್ಟ್ರೀಯ ನೀತಿಗಳಲ್ಲಿ ಅಂತರ್ಗತ ವಾಗಿರುವ ಲಿಂಗತ್ವದ ಸ್ವರೂಪವನ್ನು ನಿರ್ವಹಿಸಲು ಹರಿತವಾದ ಕಾರ್ಯತಂತ್ರಗಳನ್ನು ಅಭಿವೃದ್ಧಿಗೊಳಿಸುವುದು.

ಈ ಎಲ್ಲದಕ್ಕಾಗಿ ನಾವೀಗ ಒಗ್ಗೂಡಬೇಕಿದೆ. ಹೀಗೆ ಮಾಡಿದಲ್ಲಿ ಮಾತ್ರ ರಾಜಕೀಯ ಘಟಕಗಳಲ್ಲಿ ಮಹಿಳೆಯರ ಪ್ರಾತಿನಿಧ್ಯ ಹೆಚ್ಚಿದಷ್ಟೂ ಅಧಿಕಾರ ಪರಿವರ್ತನೆ ನಿಜವಾಗಿ ಸಾಧ್ಯವಾಗಬಲ್ಲದು.



# ದೇವಾಲಯದ ಬಾಳಿಗಿಂತ ಸಾವು ಲೇಸು ಎನಿಸಿತು

**ಮರ್ಸಿಸೆನಾಹೆ,** ಘಾನ, ಪಶ್ಚಿಮ ಆಫ್ರಿಕ.
(ತ್ರೊಕೊಸಿ ದಾಸ್ಯ ಪದ್ಧತಿಗೆ ಬಲಿಯಾದ ಮಹಿಳೆಯ ಸಾಕ್ಷಿ.)

*[ಮರ್ಸಿ ಸೆನಾಹೆ ತಮ್ಮ ಅನುಭವಗಳನ್ನು ಕೇಪ್‌ಜಾನ್ ಮಹಿಳಾ ನ್ಯಾಯಾಲಯದಲ್ಲಿ ಹೇಳಿಕೊಂಡುದರ ಪೂರ್ಣ ಪಾಠ ಇಲ್ಲಿದೆ. ನಮ್ಮ ದೇವದಾಸಿ ಪದ್ಧತಿ, ಬೆತ್ತಲೆಸೇವೆಗಳಂಥ ಕ್ರೂರ ಆಚರಣೆಗಳನ್ನು ಹೋಲುವ ಒಂದು ಪದ್ಧತಿಯನ್ನು ಈ ಲೇಖನ ವಿವರಿಸುತ್ತದೆ. ನಮ್ಮಲ್ಲೂ ಬುದ್ಧಿಜೀವಿಗಳು ಇಂಥ ಪದ್ಧತಿಗಳನ್ನು ಸಮರ್ಥಿಸಿಕೊಂಡ ಪ್ರಸಂಗಗಳುಂಟು. ಸತಿ ಪದ್ಧತಿಯನ್ನು ಸಮರ್ಥಿಸಿದ ಮಠಾಧಿಪತಿಗಳೂ ಇದ್ದಾರೆ!]*

**ಸಾಕ್ಷಿ ಮಂಡಿಸಿರುವ, ಬಿಡುಗಡೆಗಾಗಿ ಹೋರಾಡುತ್ತಿರುವ ಗೆಳತಿಯರೆ, ಮಾನವ ಹಕ್ಕುಗಳ ಪ್ರತಿಪಾದಕರೆ,**

ಪುರುಷಲೋಕದಲ್ಲಿ ನಾನು ಅನುಭವಿಸಿದ ವೇದನೆಯನ್ನು ಹೇಳಿಕೊಳ್ಳಲು, ನೀವು ಅನುಭವಿಸಿದ ಕಷ್ಟಗಳನ್ನ ಅರಿಯಲು, ಮಹಿಳೆ ಪುರುಷರಿಬ್ಬರಿಗೂ ಈ ಲೋಕ ಸುರಕ್ಷಿತವಾಗಿರುವಂತಹ ಮಾರ್ಗ ಕಂಡುಕೊಳ್ಳಲು ಇಂದು ನಿಮ್ಮೊಂದಿಗಿರಲು ನನಗೆ ಸಂತಸವಾಗಿದೆ.

ಇನ್ನು ಜೀವನಪರ್ಯಂತ ನಾನು ಅಂಗವಿಕಲಳಾಗೇ ಬದುಕ ಬೇಕೆಂಬುದನ್ನು ಹೇಳುವ ಅವಶ್ಯಕತೆಯಿಲ್ಲ. ನಿಮ್ಮೆಲ್ಲರಂತೆ ನನಗೆ ಓದು ಬರಹ ಗೊತ್ತಿಲ್ಲ. ಗೊತ್ತಿದ್ದರೆ ನಿಮ್ಮೊಂದಿಗೆ ನೇರವಾಗಿ ಮಾತನಾಡ ಬಹುದಿತ್ತು. ಆ ಸೌಭಾಗ್ಯ ನನ್ನ ಪಾಲಿಗಿಲ್ಲ. ಯಾಕೆಂದರೆ ನಾನು ಅನುಭವಿಸಿದ ತ್ರೊಕೊಸಿ ದಾಸ್ಯದ ದೆಸೆಯಿಂದಾಗಿ ನನ್ನನ್ನು ಶಾಲೆಗೆ ಹೋಗದಂತೆ ತಡೆಯಲಾಯಿತು.

'ತ್ರೊಕೊಸಿ' ಶಬ್ದವನ್ನ ನೀವು ಮೊದಲ ಸಲ ಕೇಳುತ್ತಿದ್ದೀರಿ ಅಂತಾ ನನಗೆ ಗೊತ್ತು. ಆಫ್ರಿಕಾದ ಘಾನಾದೇಶದ ನೈರುತ್ಯದಲ್ಲಿ ಪ್ರಚಲಿತದಲ್ಲಿರುವ ಒಂದು ಆಚರಣೆ ಇದು. ತಮ್ಮ ಸಂಬಂಧಿಕರ ಪಾಪ ಪ್ರಾಯಶ್ಚಿತ್ತಕ್ಕಾಗಿ ಕನ್ಯೆಯರನ್ನು ಗುಡಿಯ ಸೇವೆಗೆ ಒತ್ತಾಯದಿಂದ ಅರ್ಪಿಸಲಾಗುತ್ತದೆ. ಇಂತಹ ಪ್ರಕರಣಗಳಲ್ಲಿ, ತನ್ನ ಮೇಲೆ ಅಪರಾಧ ಎಸಗಿದ ಮನುಷ್ಯ ಯಾರೆಂದು ಕೂಡ ಈ ಬಾಲಕಿಯರಿಗೆ ಗೊತ್ತಿರುವುದಿಲ್ಲ. ಈ 'ತ್ರೊಕೊಸಿ' ಗುಲಾಮಗಿರಿ ಆಚರಣೆಯಿಂದ ಅನೇಕ ಮಹಿಳೆಯರು ಸತ್ತಿದ್ದಾರೆ. ನಾವೀಗ ಎಚ್ಚರಗೊಂಡು ಈ ಆಚರಣೆಯ ವಿರುದ್ಧ ಹೋರಾಡಿ, ತಡೆಗಟ್ಟದಿದ್ದರೆ ಇನ್ನೂ ಅನೇಕ ಬಡ ಹುಡುಗಿಯರು ಸಾಯಲಿದ್ದಾರೆ.

ತಂದೆ ತಾಯಂದಿರ ಪ್ರೀತಿ ಮತ್ತು ಪಾಲನೆಯಲ್ಲಿ ಬೆಳೆಯಬೇಕಾದ ಒಂಬತ್ತು ವರ್ಷದ ಹೆಣ್ಣುಮಗಳನ್ನು ಮನೆಯಿಂದ ಹೊರಹಾಕಿ 12 ವರ್ಷಗಳ ತನಕ ದೈಹಿಕ ಮತ್ತು ಮಾನಸಿಕ ಹಿಂಸೆಯ ಕೂಪಕ್ಕೆ, 500 ಕಿ.ಮೀ ದೂರ ಕಳಿಸಿಬಿಟ್ಟರೆ ಏನಾಗುತ್ತದೆಂದು ನೀವೇ ಕಲ್ಪಿಸಿಕೊಳ್ಳಿ. ನನಗೆ ಆದದ್ದು ಕೂಡ ಇದೇ. ಆ ದೇವಾಲಯಕ್ಕೆ ತಂದೆ ತಾಯಿ ನನ್ನನ್ನು ಕರೆತಂದಾಗ ನನಗೆ ಕೇವಲ 9 ವರ್ಷ. ಪ್ರಾಥಮಿಕ ಶಾಲೆಯ ಎರಡನೆ ತರಗತಿಯಲ್ಲಿದ್ದೆ. ನಾನು ಕಂಡಿಲ್ಲದ ನನ್ನ ಕುಟುಂಬದ ನೆಂಟರೊಬ್ಬರು ಒಂದು ಜೊತೆ ಚಿನ್ನದ ಉಂಗುರ ಕಳವು ಮಾಡಿದ್ದು ಇದಕ್ಕೆ ಕಾರಣ. ನನ್ನ ಕುಟುಂಬದ ಈ ಅಪರಾಧಕ್ಕಾಗಿ ಅವರು ಪ್ರಾಯಶ್ಚಿತ್ತ ಮಾಡಿಕೊಳ್ಳಲು ಗುಲಾಮಗಿರಿಯಲ್ಲಿ ನಲುಗಲು ನನ್ನನ್ನು ಆಯ್ಕೆ ಮಾಡಿಕೊಳ್ಳಲಾಯಿತು.

12 ವರ್ಷಗಳ ಕಾಲ ನಿರರ್ಥಕ 'ತ್ರೊಕೊಸಿ' ಗುಲಾಮಳಾಗಿ ನಾನು ಪಟ್ಟ ಕಷ್ಟ ಕಾರ್ಪಣ್ಯಗಳು ದೇವಸ್ಥಾನದ ಆ ದೇವರಿಗೆ ಹ್ಯಾಗೆ ಪ್ರಿಯವಾಯಿತೋ ನನಗೆ ಗೊತ್ತಿಲ್ಲ. ಅಂದು ಬೆಳಿಗ್ಗೆ ಶಾಲೆಗೆ ಹೊರಡುವ ಸಿದ್ಧತೆಯಲ್ಲಿದ್ದೆ. ಆಗ ನನ್ನ ತಾಯಿ ನೆರೆ ಊರಿನ ಒಬ್ಬ ಮನುಷ್ಯನ ಮನೆಯಲ್ಲಿ ನಡೆಯುವ ಹಬ್ಬಕ್ಕೆ ತಮ್ಮ ಜೊತೆ ಬರಬೇಕೆಂದು ಹೇಳಿದರು. ನನಗೆ ಓರಗೆಯ ಗೆಳತಿಯರೊಂದಿಗೆ ಶಾಲೆಗೆ ಹೋಗುವ ಆಸೆ ಇತ್ತು, ಹಬ್ಬಕ್ಕೆ ಹೋಗುವುದು ಇಷ್ಟವಿರಲಿಲ್ಲ. 'ಬರೋದಿಲ್ಲ' ಅಂತ ಹೇಳಿದೆ. ನನ್ನ ಅಜ್ಜಿ ಉದ್ದನೆ ಕೋಲುಹಿಡಿದು, ಹೋಗದಿದ್ದರೆ ಬಾರಿಸುವುದಾಗಿ ಬೆದರಿಸಿದಳು. ಹೋಗಲು ನಾನು ಒಪ್ಪಬೇಕಾಯಿತು. ಘಾನಾದೇಶದ ವೋಲ್ಟಾ ಪ್ರಾಂತದ, ಉತ್ತರ ಟೋಂಗು ಜಿಲ್ಲೆಯ, ಮಾಫಿ ಅನಾಕ್ ಪೆಡೋಮ್ ಎಂಬ ಗ್ರಾಮಕ್ಕೆ ನನ್ನನ್ನು ಎಳೆದು ತಂದರು.

2 ವಾರಗಳ ಕಾಲ ದೇವಸ್ಥಾನದಲ್ಲಿ ನನ್ನೊಂದಿಗಿದ್ದ ತಂದೆ ತಾಯಿ, ಒಂದು ದಿನ ಬೆಳಗ್ಗೆ ನಾನಿನ್ನೂ ನಿದ್ರಿಸುತ್ತಿದ್ದಾಗ ಪರಾರಿಯಾಗಿದ್ದರು. ಎಚ್ಚರವಾದ ಮೇಲೆ, ಸೇವೆ ಮಾಡಬೇಕಿದ್ದ ಕೆಡುಕ ಮುದಿ ಪೂಜಾರಿಗೆ ಎದುರಾದೆ. ಆ ಬೆಳಿಗ್ಗಿನಿಂದ 12 ವರ್ಷಗಳ ಕಾಲ ನಾನು ಒಳ್ಳೆ ಊಟ, ನೆಮ್ಮದಿ, ಬಿಡುವು, ತಂದೆತಾಯಿ ಪ್ರೀತಿ, ಗೆಳತಿಯರ ಒಡನಾಟವಿಲ್ಲದೇ ಬಾಳಿದೆ. ಇದೇ ದೇವಾಲಯದಲ್ಲಿ ಗುಲಾಮಳಾಗಿ ಸೇವೆ ಮಾಡುತ್ತಿದ್ದ ನನ್ನಅಕ್ಕ ಅಲ್ಲಿನ ಕಿರುಕುಳದಿಂದ ಸತ್ತುಹೋದಳೆಂದೂ, ಈಗ ಅದೇ ಅಪರಾಧಕ್ಕಾಗಿ ಅಕ್ಕನ ಸೇವೆ ಮುಂದುವರೆಸಲು ನನ್ನನ್ನು ಇಲ್ಲಿಗೆ ಕರೆತರಲಾಗಿದೆ ಎಂದೂ ನನಗೆ ಹೇಳಿದರು.

9 ವರ್ಷದ ಹಾಲುಗಲ್ಲದ ಹುಡುಗಿ, ಬೆಳಿಗ್ಗೆ 5 ಗಂಟೆಗೆ ಏಳಬೇಕಿತ್ತು. ಗುಡಿಯಿಂದ 5 ಕಿ.ಮೀ ದೂರದಲ್ಲಿದ್ದ ಹೊಳೆಯಿಂದ ನೀರು ತರಬೇಕಿತ್ತು. ಗುಡಿಯ ಕಸ ಗುಡಿಸಿ, ಖಾಲಿ ಹೊಟ್ಟೆಯಲ್ಲೇ ದುಡಿಯಲು ತೋಟಕ್ಕೆ ಹೋಗಬೇಕಿತ್ತು. ಜೀವಿಸಿರಲು ಹಸಿ ಮೆಣಸು, ಭಗಿನೆ ಮರದ ಕಾಯಿ ತಿಂದು ಹೊಟ್ಟೆ ತುಂಬ ತಣ್ಣೀರು ಕುಡಿಯುತ್ತಿದ್ದೆ.

ಆ ಪೂಜಾರಿಯ ತೋಟದಲ್ಲಿ ಬೆಳಗಿನಿಂದ ಬೈಗಾನದಗುಂಟ ದುಡಿದು, ಸಂಜೆಹೊತ್ತಿಗೆ ಆಹಾರ ಹುಡುಕಿಕೊಳ್ಳಲು ಕಾಡಿಗೆ ಹೋಗುತ್ತಿದ್ದೆ. ಏನೂ ಸಿಗದಂತಹ ದಿನಗಳಿವೆ. ಕೆಲವು ಸಲ ಆಜುಬಾಜಿನ ಹಳ್ಳಿಗಳಲ್ಲಿ ಭಿಕ್ಷೆ ಬೇಡುತ್ತಿದ್ದೆ ಅಥವಾ ಒಪ್ಪತ್ತಿನ ಊಟಕ್ಕಾಗಿ ತೋಟದ ಕೆಲಸ ಮಾಡಿಕೊಡುತ್ತಿದ್ದೆ.

11 ವರ್ಷದವಳಿರುವಾಗ, 40 ವರ್ಷದ ಪೂಜಾರಿ ನನ್ನ ಮೇಲೆ ಅತ್ಯಾಚಾರ ಎಸಗಿದ. ಇದು ಆ ಗುಡಿಯಲ್ಲಿ ನನ್ನ ತುಂಬಾ ನೋವಿನ ಅನುಭವ. ರಾತ್ರಿ ಅವನು ನನ್ನ ಬಲಾತ್ಕಾರ ಮಾಡಿದ, ಆದರೆ ನಾನು

## ತ್ರೊಕೊಸಿ ದಾಸ್ಯ ಪದ್ಧತಿ

'ತ್ರೊಕೊಸಿ' ಒಂದು ಸಂಯುಕ್ತ ಪದ, 'ತ್ರೊ' ಅಂದರೆ ಅರಣ್ಯವಾಸಿ ಜನರ ದೇವರು; 'ಕೊಸಿ' ಎಂದರೆ ಹೆಣ್ಣು ಜೀತದಾಳು. ಸಂಕ್ಷಿಪ್ತ ಅರ್ಥ ದೇವದಾಸಿ. ಪ.ಆಫ್ರಿಕಾದ ಘಾನಾದಲ್ಲಿ ಆಚರಣೆಯಲ್ಲಿರುವ 'ತ್ರೊಕೊಸಿ' ಪದ್ಧತಿ 17ನೇ ಶತಮಾನದಲ್ಲಿ ಆರಂಭವಾಯಿತು. ಈ ಪದ್ಧತಿ ಪ್ರಕಾರ, ಮಾಡಿದ ಅಪರಾಧಗಳ ಪ್ರಾಯಶ್ಚಿತ್ತಕ್ಕಾಗಿ ತಮ್ಮ ಮನೆಯ ಕನ್ಯೆಯರನ್ನು ತ್ರೊಕೊಸಿಗಳಾಗಿ ಗುಡಿಗಳಿಗೆ ಕಳಿಸುತ್ತಾರೆ.

ಒಬ್ಬರು ಇನ್ನೊಬ್ಬರಿಗೆ ಕೇಡುಂಟು ಮಾಡಿದಾಗ, ಕೇಡಿಗೊಳಗಾದವರು ಗುಡಿಗೆ ಹೋಗಿ ತನಗಾದ ಅನ್ಯಾಯ ವರದಿ ಮಾಡಿ ಆ ವ್ಯಕ್ತಿಯನ್ನು ಶಪಿಸುತ್ತಾರೆ. ಆಗ ಕೇಡು ಮಾಡಿದವರ ಮನೆಯಲ್ಲಿ ತೊಂದರೆಗಳು ಕಾಣಿಸಿಕೊಳ್ಳುತ್ತಿರುತ್ತವೆ. ಮನೆಯ ತರುಣಿಯರನ್ನು 'ತ್ರೊಕೊಸಿ' ಮಾಡಿದಾಗ ಈ ತೊಂದರೆಗಳು ಶಮನವಾಗುತ್ತವೆ ಎಂಬುದು ಘಾನಾದಲ್ಲಿರುವ ಒಂದು ಮೂಢ ನಂಬಿಕೆ. ಮುಗ್ಧ ಹುಡುಗಿಯೊಬ್ಬಳು ತ್ರೊಕೊಸಿಯಾಗಿ ಗುಡಿ ಸೇರಿದರೆ ಅಂದಿನಿಂದ ಆ ಹೆಣ್ಣು ಪೂಜಾರಿಯ ಸ್ವತ್ತು. ಆಕೆ ಆ ದಿನದಿಂದ ಪೂಜಾರಿಯ ತೋಟ, ಮನೆಯಲ್ಲಿ ಜೀತ ಮಾಡಬೇಕು. ಆಹಾರ, ಬಟ್ಟೆಬರೆಗಳನ್ನು ತಾನೇ ಹೊಂಚಿಕೊಳ್ಳಬೇಕು. ಪೂಜಾರಿ ಬಯಸಿದಾಗ ಅಥವಾ ಋತುಮತಿಯಾದಾಗ ಪೂಜಾರಿಯ ಜೊತೆ ಮಲಗಬೇಕು. ಈ ಆಕ್ರಮಣದಿಂದ ಆಕೆ ಗರ್ಭಿಣಿಯಾದರೆ ಅದು ಆಕೆಯ "ಕರ್ಮ". ಇಂತಹ ಘಾತುಕ ಪದ್ಧತಿಗೆ ಪ್ರತಿಕ್ರಿಯಿಸಿದ ಸಂಸ್ಥೆಗಳು ಘಾನಾದಲ್ಲಿ ಈವರೆಗೆ ಸುಮಾರು 2800 ಮಹಿಳೆ ಮತ್ತು ಬಾಲಕಿಯರನ್ನು ತ್ರೊಕೊಸಿ ಪದ್ಧತಿಯಿಂದ ಮುಕ್ತಗೊಳಿಸಿವೆ. ಇದರಲ್ಲಿ ಮಕ್ಕಳು ಸೇರಿಲ್ಲ. ಘಾನಾದಲ್ಲೇ ಸುಮಾರು 2200 ತ್ರೊಕೊಸಿ ಮಹಿಳೆ ಮತ್ತು ಹೆಣ್ಣು ಮಕ್ಕಳಿದ್ದಾರೆ. ಈ ಪದ್ಧತಿ ನಿರ್ಮೂಲನೆಯ ಅಗತ್ಯ ಮನಗಂಡ ಘಾನಾ ಸರ್ಕಾರ 1998 ಆಗಸ್ಟ್‌ನಲ್ಲಿ 'ತ್ರೊಕೊಸಿ ನಿರ್ಮೂಲನ ಕಾಯಿದೆ' ಜಾರಿಗೆ ತಂದಿತು. ಆದರೂ ತ್ರೊಕೊಸಿ ವಿರುದ್ಧ ಮೊದಲಿನಿಂದ ಹೋರಾಡುತ್ತಿದ್ದ ಸಂಸ್ಥೆಗಳು ಈ ಬಗ್ಗೆ ತಿಳಿವಳಿಕೆ ಮೂಡಿಸಲು ನಿರಂತರ ಪ್ರಯತ್ನ ನಡೆಸುತ್ತಿವೆ. ಈ ಕಾರ್ಯ 7 ವರ್ಷಗಳಿಂದ ನಡೆದಿದೆ. ವಿಪರ್ಯಾಸವೆಂದರೆ ತ್ರೊಕೊಸಿ ವಿರುದ್ಧ ಹೋರಾಟ ನಡೆಯುತ್ತಿದ್ದರೂ, ಸರ್ಕಾರ ಈ ಪದ್ಧತಿಯನ್ನು ಅಪರಾಧ ಎಂದು ಘೋಷಿಸಿದ್ದರೂ ಈವರೆಗೆ ಒಂದು ದೂರನ್ನು ಕೂಡ ದಾಖಲಿಸಿ, ಶಿಕ್ಷೆ ವಿಧಿಸಿಲ್ಲ. ತ್ರೊಕೊಸಿ ನಿರಂತರ ಸಾಗಿದೆ.

ಈ ಮಧ್ಯೆ 'ಆಫ್ರಿಕಾನಿಯಾ ಮಿಷನ್' ಎಂಬ ಹೆಸರಿನ ಕರ್ಮಠ ಸಂಘಟನೆಯೊಂದು ತ್ರೊಕೊಸಿ ಪದ್ಧತಿಯ ಬೆಂಬಲಕ್ಕೆ ನಿಂತಿದೆ. ತ್ರೊಕೊಸಿ ಘಾನಾ ಸಂಸ್ಕೃತಿಗಳಲ್ಲಿ ಒಂದು, ಅದರ ವಿರುದ್ಧ ಹೋರಾಡುವುದು ಘಾನಾ ಸಂಸ್ಕೃತಿ ನಾಶ ಮಾಡಿದಂತೆ ಎಂದು ವಾದಿಸುತ್ತ ಮಾನವ ಹಕ್ಕು ಕಾರ್ಯಕರ್ತರಿಗೆ ಜೀವ ಬೆದರಿಕೆ ಹಾಕಿದೆ. ಬಂಧನ ಮುಕ್ತಗೊಂಡ ತ್ರೊಕೊಸಿಗಳನ್ನು ಕಲೆ ಹಾಕಿ ಮಹಿಳಾ ಹಕ್ಕುಗಳಿಗಾಗಿ ಹೋರಾಡುತ್ತಿರುವ ವಿನ್ಸೆಂಟ್ ಅಜುಮಾ ಅವರಿಗೂ ಈ ಸಂಘಟನೆ ಜೀವ ಬೆದರಿಕೆ ಹಾಕಿದೆ. ವಿನ್ಸೆಂಟ್ ಅವರು 'Survivors for change' ಎಂಬ ಸಂಘಟನೆ ಕಟ್ಟಿ ತ್ರೊಕೊಸಿ ಪದ್ಧತಿ ವಿರುದ್ಧ ಹೋರಾಡುತ್ತಿದ್ದಾರೆ.

Survivors for change ಸಂಘಟನೆಯ ಸದಸ್ಯೆ ಮರ್ಸಿ ಸೆನಾಹೆ ತಮ್ಮ ಅನುಭವದ ಬಗ್ಗೆ ಕೇಪ್ ಟೌನ್ ಮಹಿಳಾ ನ್ಯಾಯಾಲಯದಲ್ಲಿ ಸಾಕ್ಷಿ ಹೇಳಿದ್ದಾರೆ. 1999ರ ಅಂತಾರಾಷ್ಟ್ರೀಯ ರೀಬಾಕ್ ಮಾನವ ಹಕ್ಕು ಪ್ರಶಸ್ತಿಗೆ ಪಾತ್ರರಾದ ಜೂಲಿಯಾನರು ವಿನ್ಸೆಂಟ್ ಅಜುಮಾರಿಂದ ಹೋರಾಟಕ್ಕೆ ರೂಪುಗೊಂಡ ಮೊದಲ ಮಹಿಳೆ.

ಘಾನಾ ಸರ್ಕಾರ ತ್ರೊಕೊಸಿ ನಿಷೇಧಕ್ಕೆ ಮುಂದಾಗಿ ಕಾನೂನು ಜಾರಿಗೆ ತಂದಿದೆ. ಆದರೆ ಟೊಗೊ ಹಾಗೂ ಬೆನಿನ್‌ಗಳಲ್ಲಿ ಈವರೆಗೆ ಯಾವುದೇ ಕ್ರಮ ಕೈಗೊಂಡಿಲ್ಲ. ಹೀಗಾಗಿ ಟೊಗೊ, ಬೆನಿನ್‌ಗಳಲ್ಲಿ ತ್ರೊಕೊಸಿ ಪದ್ಧತಿಗೆ ಬಲಿಯಾಗಿ ನರಳುತ್ತಿರುವ ಮಹಿಳೆಯರ ಸಂಖ್ಯೆ ಘಾನಾಕ್ಕಿಂತ 3 ಪಟ್ಟು ಜಾಸ್ತಿ ಎಂಬ ಅಂದಾಜಿದೆ. ಈ 2 ದೇಶಗಳಲ್ಲಿ ತ್ರೊಕೊಸಿ ನಿಷೇಧ ಆಜ್ಞೆಗಳನ್ನು ಜಾರಿಗೆ ತರದಿದ್ದರೆ ಘಾನಾದ ಹೆಣ್ಣುಗಳನ್ನು ಗಡಿ ದಾಟಿಸಿ ಈ ದೇಶಗಳಲ್ಲಿ ಆಚರಣೆಯಲ್ಲಿರುವ ಗುಡಿಗಳಿಗೆ ರವಾನಿಸುವ ಸಾಧ್ಯತೆ ಹೆಚ್ಚಾಗಿದೆ.

*[ಮೂಲ : ವಿನ್ಸೆಂಟ್ ಅಜುಮಾ, ಜೂಲಿಯಾನಾ ದಾಗ್ ಬಾಜಿ, ಘಾನಾ, ತ್ರೊಕೊಸಿ ಪದ್ಧತಿ ಕುರಿತ ಉದ್ದೇಶಿತ ಮಹಿಳಾ ನ್ಯಾಯಾಲಯಕ್ಕಾಗಿ ಸಿದ್ಧಪಡಿಸಿದ ಹಿನ್ನೆಲೆ ಟಿಪ್ಪಣಿ.]*

ಹೋರಾಟ ಮಾಡುತ್ತ ಕಿರುಚಿಕೊಂಡೆ. ಅವನು ನನ್ನನ್ನು ಹೊಡೆದ; ಆದರೂ ನಾನು ಅವನಿಗೆ ಅವಕಾಶ ಕೊಡಲಿಲ್ಲ.

ವಾರದ ನಂತರ ಮತ್ತೆ ಬಂದ, ಬಲಪ್ರಯೋಗದಿಂದ ಕಠೋರವಾಗಿ ಹಿಂಸಿಸಿದ. ನಾನು ಛಿದ್ರಗೊಂಡಿದ್ದೆ. ನನ್ನಂತೆ ಈ ಯಾತನಾಮಯ ವಿಧಿಯನ್ನು ಬಾಳಿ, ಬದುಕಿನ ಮುಸ್ಸಂಜೆಯಲ್ಲಿದ್ದ ಅಜ್ಜಿ ಪ್ರತಿದಿನ ನನಗೆ ಬಿಸಿನೀರಿನ ಸ್ನಾನ ಮಾಡಿಸಿ, ನನ್ನ ಗಾಯಗಳು ಮಾಯುವ ತನಕ ಉಪಚರಿಸಿದಳು.

ತಿಂಗಳು ಕಳೆಯಿತು. ಮತ್ತೆ ಆ ಯಾತನಾಮಯ ವಿಧಿ ಯಥಾ ಪ್ರಕಾರ ನಡೆದುಕೊಂಡು ಹೋಯಿತು. ನಾನು ಪ್ರತಿಭಟಿಸುತ್ತಿರಲಿಲ್ಲ. ಯಾಕೆಂದರೆ ಕಠೋರವಾಗಿ ಚಚ್ಚುತ್ತಿದ್ದರು. ಆಗ ನಾನು ತುಂಬಾ ಚಿಕ್ಕ ಹುಡುಗಿ, ಗರ್ಭಿಣಿಯಾಗಿರುವ ಅರಿವಾಯಿತು. ಹದಿಮೂರನೆ ವಯಸ್ಸಿನಲ್ಲಿ ಮೊದಲ ಮಗುವಿನ ತಾಯಿಯಾದೆ.

ಈ ಒಲ್ಲದ ತಾಯ್ತನ ನನ್ನ ಬದುಕನ್ನು ಮತ್ತಷ್ಟು ದುಸ್ತರಗೊಳಿಸಿತು. ಇತ್ತ ಹಸುಳೆಯ ಆಹಾರಕ್ಕೆ ಪರದಾಟ, ಅತ್ತ ಪೂಜಾರಿಯ ಕಾಟ. ಮತ್ತೆ ನಾನು ಗರ್ಭಿಣಿಯಾದೆ. ಆ ದೇವಸ್ಥಾನಕ್ಕೆ ಕುಟುಂಬಯೋಜನೆ ಶಿಕ್ಷಣ ಸಿಕ್ಕಿರಲಿಲ್ಲ ಅನಿಸುತ್ತೆ. ಎರಡನೆ ಮಗು ಹುಟ್ಟಿದ ನಂತರ ನನ್ನ ಮೇಲಿನ ಹೊಣೆ ಇಮ್ಮಡಿಯಾಯಿತು. ದೇವಸ್ಥಾನದಿಂದ ತಪ್ಪಿಸಿಕೊಂಡು ಸಾಂತ್ವನ, ಸಮಾಧಾನ ಬಯಸಿ ತವರಿಗೆ ಬಂದೆ. ಆದರೆ ದಿಗ್ಭ್ರಮೆ ಕಾದಿತ್ತು. ಕೋಪಿಸಿಕೊಂಡ ನನ್ನ ತಂದೆತಾಯಿ ಮಾರನೆ ದಿನವೇ ನನ್ನನ್ನು ವಾಪಸು ಕಳಿಸಿಬಿಟ್ಟರು.

ನನ್ನ ಆ ವಿಧಿ ಮತ್ತೆ ಮುಂದುವರೆಯಿತು.

ಬದುಕು ಸಾಕುಸಾಕಾಗಿದೆ ಅನಿಸಿ ಸಾವಿಗಾಗಿ ಪ್ರಾರ್ಥಿಸುತ್ತಿದ್ದೆ, ಆದರೆ ಅತ್ಯಾಚಾರ ಮುಂದುವರೆಯಿತು. ದೇವಸ್ಥಾನದಲ್ಲಿ ನಾಲ್ಕು ಮಕ್ಕಳ ತಾಯಿಯಾದೆ. ದೇವಸ್ಥಾನ ಬಿಟ್ಟು ಹೋದರೆ ನಿನಗೆ ಉಳಿಗಾಲವಿಲ್ಲ

ಅಂತಾ ಅವರು ಹೆದರಿಸುತ್ತಿದ್ದರು. ಆದರೆ ನಾನೊಂದು ತೀರ್ಮಾನ ಮಾಡಿಬಿಟ್ಟಿದ್ದೆ. ದೇವಸ್ಥಾನದ ಇಂತಹ ಬಾಳಿಗಿಂತ ಸಾವೇ ಲೇಸೆಂದು ನಾನು ಕೊನೆಗೂ ದೃಢನಿರ್ಧಾರ ಮಾಡಿಬಿಟ್ಟೆ. ತಂದೆ ತಾಯಿಗೆ ಸುದ್ದಿ ಕಳಿಸಿದೆ. 'ನೀವು ಬಂದು ಈ ಪೂಜಾರಿಯಿಂದ ನನ್ನ ಬಿಡುಗಡೆ ಮಾಡಿ ಕರೆದುಕೊಂಡು ಹೋಗದಿದ್ದರೆ ನೀವು ಮತ್ತೆಂದಿಗೂ ನನ್ನ ಕಾಣಲಾರಿರಿ. ನಾನಂತೂ ಇಲ್ಲಿಂದ ಹೊರಡುವ ತೀರ್ಮಾನ ಮಾಡಿದ್ದೇನೆ.....'

ನಾನು ತಪ್ಪಿಸಿಕೊಂಡು ಹೋದರೆ ದೇವಸ್ಥಾನಕ್ಕೆ ಮತ್ತೊಬ್ಬಳು ಮಗಳನ್ನು ಕಳಿಸಬೇಕಾಗುತ್ತದೆಂದು ಹೆದರಿದ ತಂದೆತಾಯಿ ನನ್ನ ಬೆದರಿಕೆಗೆ ಪ್ರತಿಕ್ರಿಯಿಸಲು ನಿರ್ಧರಿಸಿದರು ಅಂತಾ ಕಾಣುತ್ತೆ. ಇದೇ ವೇಳೆಗೆ ನನ್ನ ಬಿಡುಗಡೆ ಮಾಡುವಂತೆ ಪೂಜಾರಿಯ ಮನ ಒಲಿಸಲು ಘಾನಾದೇಶದ ಮಾನವ ಹಕ್ಕುಗಳ ಸಂಸ್ಥೆಯ ಅಧಿಕಾರಿಗಳು ಅಂದು ಆ ದೇವಸನ್ನಿಧಿಗೆ ಬರಲಿದ್ದರು.

ಅವರಿಂದ ಹಣಕಾಸು ಮತ್ತು ಇತರೆ ವಸ್ತುಗಳನ್ನು ಪಡೆದುಕೊಂಡ ಪೂಜಾರಿ ಕೊನೆಗೂ ನನ್ನ ಬಿಡುಗಡೆಗೆ ಒಪ್ಪಿಗೆ ಕೊಟ್ಟ. ಮುಂದೆ ನಾನು 'ಇಂಟರ್‌ನ್ಯಾಷನಲ್ ನೀಡ್ಸ್' ಸಂಸ್ಥೆಯ ನೆರವಿನಿಂದ ಅನೇಕ ಕುಶಲಕಲೆಗಳಲ್ಲಿ ನೈಪುಣ್ಯ ಸಾಧಿಸಿದೆ.

ನಾಲ್ಕು ಮಕ್ಕಳೊಂದಿಗೆ ದೇವಸನ್ನಿಧಿಯಿಂದ ಬಿಡುಗಡೆಯಾದ ನಾನು ಬಟ್ಟೆ ಹೊಲಿಗೆಯಲ್ಲಿ ತರಬೇತಿ ಪಡೆದೆ.

ನನಗೆ ನಾನೇ ಸಂಕಲ್ಪ ತೊಟ್ಟೆ, ಆಚರಣೆ, ಸಂಪ್ರದಾಯ ಪದ್ಧತಿಗಳ ಹೆಸರಿನಲ್ಲಿ ಮಹಿಳೆಯರ ಮೇಲೆ ಎಸಗಲಾಗುತ್ತಿರುವ ಕ್ರೌರ್ಯವನ್ನು ದೇವಸ್ಥಾನಗಳಿಂದ ಗುಡಿಸಿಬಿಡಬೇಕು. 'ತ್ರೊಕೊಸಿ' ಗುಲಾಮಗಿರಿ ಪದ್ಧತಿಯನ್ನು ಸಂಪೂರ್ಣ ನಿರ್ಮೂಲನ ಮಾಡಬೇಕು.

ನನ್ನಂತಹ 2800 ಮಹಿಳೆಯರನ್ನು 'ಇಂಟರ್‌ನ್ಯಾಷನಲ್ ನೀಡ್ಸ್' ಸಂಸ್ಥೆ ದೇವಸನ್ನಿಧಿಗಳಿಂದ ಬಿಡುಗಡೆಗೊಳಿಸಿತು. ಇನ್ನೂ 2400 ಮಹಿಳೆಯರು ಮತ್ತು ಮುಗ್ಧ ಬಾಲಕಿಯರು ಘಾನಾದೇಶದ ದೇವಸ್ಥಾನಗಳಲ್ಲಿ ಜೀವ ತೇಯುತ್ತ ಜೀತ ಮಾಡುತ್ತಿದ್ದಾರೆ.

ಮಾನವ ಹಕ್ಕು ಪ್ರತಿಪಾದನೆ ಬಗ್ಗೆ ನಮ್ಮಲ್ಲಿ ಬಹಳಷ್ಟು ಮಹಿಳೆಯರಿಗೆ ಅರಿವು ಮೂಡಿಸಿದ ಮಿಸ್ಟರ್ ವಿನ್ಸೆಂಟ್ ಅಜೂಮಾ ಅವರ ನೆರವಿನೊಂದಿಗೆ ನಾವು 'ಬದಲಾವಣೆಗಾಗಿ ಬಿಡುಗಡೆಯಾದ ಮಹಿಳೆಯರು' (survivors for change) ಎಂಬ ಸಂಘಟನೆ ಕಟ್ಟಿಕೊಂಡೆವು. ಇದು ತ್ರೊಕೊಸಿ ದೇವಸನ್ನಿಧಿಗಳಿಂದ ಬಿಡುಗಡೆಯಾಗಿ ಆ ಅನಿಷ್ಟ ಪದ್ಧತಿಯ ಸಂಪೂರ್ಣ ನಿರ್ಮೂಲನೆಗಾಗಿ ಸಂಕಲ್ಪ ತೊಟ್ಟಿರುವ ಹಲವು ಮಹಿಳೆಯರ ಒಕ್ಕೂಟ.

ಈ ಪದ್ಧತಿ ಎಲ್ಲೆಲ್ಲಿ ಚಾಲ್ತಿಯಲ್ಲಿದೆಯೋ ಅಲ್ಲಿಗೆಲ್ಲಾ ಪರಿವರ್ತನೆಯ ಸಂದೇಶ ಕೊಂಡೊಯ್ಯುವ ಭರವಸೆ ನಮಗಿದೆ. ನನ್ನಂತೆ ಸಾಮಾಜಿಕ ಮತ್ತು ಸಾಂಸ್ಕೃತಿಕ ನಿಂದನೆಗೊಳಗಾದ ಎಲ್ಲ ಮಹಿಳೆಯರಿಗೂ ಮತ್ತೆ ಮಾನವಸಹಜ ಜೀವನ ನಡೆಸುವ ವಾತಾವರಣ ಕಲ್ಪಿಸಲು ನಾವು ಒಟ್ಟಾಗಿ ದುಡಿಯುತ್ತಿದ್ದೇವೆ. ಈಗ ಘಾನಾ ದೇಶದಲ್ಲಿ ಹೊಸ ಸರ್ಕಾರ ಅಧಿಕಾರದ ಗದ್ದುಗೆ ಏರಿದೆ. ತ್ರೊಕೊಸಿ ದಾಸ್ಯ ಪದ್ಧತಿ ಮತ್ತು ಕುಟಿಲ ಸ್ತ್ರೀ ಆಚರಣ ವಿಧಿಗಳ ವಿರುದ್ಧ ಘೋಷಣೆ ಮಾಡಿರುವ ಕಾನೂನನ್ನು ಜಾರಿಗೊಳಿಸಬೇಕೆಂದು ಸರ್ಕಾರವನ್ನು ಒತ್ತಾಯಿಸಲು ನಿಮ್ಮೆಲ್ಲರ ಬೆಂಬಲ ಸಿಗುತ್ತದೆಂದು ಆಶಿಸುತ್ತೇನೆ.

ಘಾನಾ ಮತ್ತು ಪಶ್ಚಿಮ ಆಫ್ರಿಕಾದ ಉಪಪ್ರಾಂತಗಳಲ್ಲಿ ಆಚರಣೆಯಲ್ಲಿರುವ ಲಿಂಗ, ವರ್ಣಭೇದ ಪದ್ಧತಿಯ ವಿರುದ್ಧ ಪೂರ್ಣ ಪ್ರಮಾಣದ ಚಳವಳಿ ನಡೆಸಲು ಹೊಸತಾಗಿ ಕಟ್ಟಿಕೊಂಡಿರುವ ನಮ್ಮ **'ಬದಲಾವಣೆಗಾಗಿ ಬಿಡುಗಡೆಯಾದ ಮಹಿಳೆಯರು'** ಸಂಸ್ಥೆಗೆ ನಿಮ್ಮ ಬೆಂಬಲ ಬೇಕು.

ಸಮಾನತೆ ಮತ್ತು ಶಾಂತಿಗಾಗಿ, ಲಿಂಗ, ವರ್ಣಭೇದ ಪದ್ಧತಿ ಮತ್ತು ನೀತಿಗಳನ್ನು ಜಗತ್ತಿನಿಂದ ಅಳಿಸಿಹಾಕಲು, ಅವುಗಳನ್ನು ಪ್ರತಿಭಟಿಸಲು ಧೈರ್ಯಕೊಡುವಂತೆ ದೇವರಲ್ಲಿ ಪ್ರಾರ್ಥಿಸುತ್ತೇವೆ.

ಕೃತಜ್ಞತೆಗಳು.

ಕೃಪೆ : **ಕತ್ತಲ ಕಾಡಹಾಡು**
ಏಷಿಯಾ ಮಹಿಳಾ ಹಕ್ಕುಗಳ ಪರಿಷತ್

## ಕೈತುಂಬ ಕೆಲಸ



**ಕೆ**ದ ತಟ್ಟುತ್ತಿದ್ದೇನೆ ಕಟ್ಟದ ಮನೆ ಬಿಡದೆ
ಎಂದಾದರೊಂದು ದಿನ ದಕ್ಕದೆ ಅದು, ದಕ್ಕದೆ ಅದು

ಯಾರು, ಯಾರದು ಎಂದೆಯಾ ತಂದೆ
ಅದೇ ನಿನ್ನ ಕಮಲ ಪಾದಗಳ ಮೇಲೆ ಕಳೇವರವನಿರಿಸಿ
ನಿನ್ನಾದೇಶವನು ಸೆರಗ ತುದಿಗೆ ಕಟ್ಟಿ
ನಾಲ್ಕು ಯುಗಕಾಗುವಷ್ಟು ವ್ಯಾಮೋಹದ ಬುತ್ತಿ
ಹೊತ್ತರೆಯುತಿರುವವಳು

ಯಾಕೆ, ಯಾಕೆಂದು ಕೇಳಿದೆಯಾ ತಂದೆ
ಕೂಸೇ ಅಖಿಲ ಜಗತ್ತಾಗಿರುವುದಕ್ಕೆ
ಗಂಡೆಂಬುದು ಒಂದು ಹನಿ
ಉಳಿದದ್ದು ನನ್ನದೇ ರಕ್ತ ಮಾಂಸ ತಡಿಕೆ ತಲೆದಿಂಬು
ಇದ ಬಿಡಲಾಕೆ ಬಿಡಲಾರದ್ದಕ್ಕೆ

ಬಾ ಮಗಳೆ ಒಳಗೆಂದು ಕರೆದೆಯಾ ತಂದೆ
ಇಲ್ಲ, ನಾನಿಲ್ಲಿಯೇ ಇರುತ್ತೇನೆ
ಜಗಕೆ ತುರ್ತಾದಾಗ ಸಿದ್ಧಾರ್ಥನನು ತಳೆದು ಕೊಡುತ್ತೇನೆ.
ಬೋಧಿ ನೆರಳಿಗಿಂತಲೂ ಮೊದಲು
ನನ್ನ ತೋಳ ನೆರಳಿನಲ್ಲವನು ಬೆಳೆದು
ಗೆಲ್ಲಲಾರದ ನಾನು ಗೆದ್ದ ಅವನ ಕಣ್ತುಂಬ ನೋಡಿ
ಗೆದ್ದೆನೆಂದು ಬೀಗುತ್ತೇನೆ.

ಒಂಟಿಯಾಗುವೆ ಮಗು ಎಂದೆಚ್ಚರಿಸಿದೆಯಾ ತಂದೆ
ಎಲ್ಲಿ? ಅವನು ಹೋದರೂ ಇವನಿರುತ್ತಾನಲ್ಲ
ಬೆಳೆಸಬೇಡವೇ ಅವನ ಕಲ್ಲುಗುದ್ದಿ ನೀರು ತೆಗೆಯುವ ಹಾಗೆ
ದಕ್ಕಿಸಿಕೊಡಬೇಡವೇ ಅವನ ತಾತನ ಗದ್ದುಗೆ ಅವನಿಗೇ
ಬರುವ ಅವನ ವಧು ದೀರ್ಘಾಯುವನು ಹೆರಲು
ಹಸುವಿನ ತುಪ್ಪ, ಬೇಯಿಸಿದ ಎಣ್ಣೆ, ಪಥ್ಯ, ಲೇಹ್ಯ
ಓ, ಕೈತುಂಬ ಕೆಲಸ
ಬಿಡುವಿಲ್ಲ ತಂದೆ
ಕ್ಷಮಿಸು

– **ಲಲಿತಾ ಸಿದ್ದಬಸವಯ್ಯ**

# ಹೊನ್ನಿನ ಹಂದರದಲ್ಲಿ
# ಸುಂದರ ಕರ್ನಾಟಕ–

ಕರುನಾಡ ಸಿರಿನುಡಿ – ಕನ್ನಡ
ಕಸ್ತೂರಿ ಪರಿಮಳದ ಕುಡಿ – ಕನ್ನಡ ನುಡಿ
ಹಾಲ್ಜೇನಿನ ಮಧುರ ಝರಿ – ಕನ್ನಡ ನಾಣ್ನುಡಿ

ಸುಮಾರು 2000 ವರ್ಷಗಳ ಇತಿಹಾಸವಿರುವ ಕನ್ನಡ ಭಾಷೆ, ಸಾಹಿತ್ಯ ಅನನ್ಯ ಮತ್ತು ಅನುಕರಣೀಯ. ಇಂದು ಕೂಡ ಕರ್ನಾಟಕ ಸಮಗ್ರ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ಆಟೋಮೊಬೈಲ್ ಉದ್ಯಮ, ಸಿದ್ಧ ಉಡುಪು, ಆಭರಣಗಳು, ಕ್ರೀಡೆ, ಪುಷ್ಪೋದ್ಯಮದಂತಹ ಪ್ರಮುಖ ಕ್ಷೇತ್ರಗಳಲ್ಲಿ ಸಾಧಿಸಿದ ಪ್ರಗತಿಯೂ ಶ್ಲಾಘನೀಯ, ಕರ್ನಾಟಕ ಭಾರತಕ್ಕಷ್ಟೇ ಮಾತ್ರವಲ್ಲ ಇಡೀ ವಿಶ್ವಕ್ಕೆ ಮಾದರಿ.

**ಅಪಾರ ಕೀರ್ತಿ ಗಳಿಸಿ ಮೆರೆವ ಭವ್ಯನಾಡಿಗೆ... ಇಂದು ಸುವರ್ಣ ಸಂಭ್ರಮ**


ಕರ್ನಾಟಕ ವಾರ್ತೆ
**Karnataka information**

ಸುವರ್ಣ ಕರ್ನಾಟಕ ವರ್ಷ:2006

Registered with Registrar of Newspapers of India under No. KARKAN/2007/22289
'NAMMA MANASA', REGD. No. : MAG(3) NPP/399(A) / 2006-07 KA/BGS/2074/2007-09

## ನಮ್ಮ ಮಾನಸ

- ಮಹಿಳೆಯರಿಗೆ ಸಂಬಂಧಿಸಿದ ಲೇಖನಗಳು, ವರದಿಗಳು ವಿಶ್ಲೇಷಣೆಗಳು, ವಿಮರ್ಶೆಗಳು, ಅನುಭವಗಳು, ಕತೆ–ಕವನಗಳನ್ನು ನಮ್ಮ ಪತ್ರಿಕೆಯಲ್ಲಿ ಪ್ರಕಟಿಸಲಾಗಿದೆ.
- ಪತ್ರಿಕೆಯು ವಿಷಯಾಧರಿತವಾಗಿದ್ದು, ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಮಹಿಳೆಯರ ಬದುಕಿನ ಮೇಲೆ ಪರಿಣಾಮ ಬೀರುವ ಸಾಮಾಜಿಕ, ರಾಜಕೀಯ, ಆರ್ಥಿಕ ವಿಚಾರಗಳನ್ನು ಚರ್ಚಿಸಲಾಗಿದೆ.
- ವಿವಾಹ, ಕುಟುಂಬದಂತಹ ಸಾಮಾಜಿಕ ಸಂಸ್ಥೆಗಳು, ಮನೆಗೆಲಸ, ಸಂಬಳರಹಿತ ದುಡಿಮೆ, ಆರ್ಥಿಕ ನೀತಿ, ಜಾತಿ, ವರ್ಗ, ಸೌಂದರ್ಯ, ಲಿಂಗ, ಹೆಣ್ತನ ಮುಂತಾದ ವಿಷಯಗಳನ್ನು ಚರ್ಚೆಗೊಳಪಡಿಸಿ ಪ್ರಕಟಿಸಲಾಗಿದೆ. ಗುತ್ತಿಗೆ ಪೌರಕಾರ್ಮಿಕರ ಹೋರಾಟಗಳಿಗೆ ಸ್ಪಂದಿಸಿ ಲೇಖನಗಳನ್ನು ಪ್ರಕಟಿಸಿದೆ.
- ಆರೋಗ್ಯ, ಲೈಂಗಿಕತೆ, ಅಪಾಯಕಾರೀ ಗರ್ಭ ನಿರೋಧಕಗಳು, ಆರ್ಥಿಕತೆ ಮತ್ತು ಅಭಿವೃದ್ಧಿ, ಅಭಿವೃದ್ಧಿ ಯೋಜನೆಗಳು ಮುಂತಾದ ವಿಚಾರಗಳನ್ನು ವಿಮರ್ಶೆಗೊಳಪಡಿಸಲಾಗಿದೆ.
- ಅಣ್ವಸ್ತ್ರೀಕರಣ, ಮಿಲಿಟರೀಕರಣ, ಜಾಗತೀಕರಣದಂಥ ಬೆಳವಣಿಗೆಗಳನ್ನು ಮಹಿಳಾ ದೃಷ್ಟಿಕೋನದಿಂದ ಪ್ರಶ್ನಿಸಲಾಗಿದೆ.
- ಇತರ ಪ್ರಜಾಸತ್ತಾತ್ಮಕವಾದ ಸಂಘಟನೆಗಳೊಡನೆ ಕೋಮುವಾದ, ಸಮಾನ ನಾಗರಿಕ ಸಂಹಿತೆ, ಮೀಸಲಾತಿ, ಲೈಂಗಿಕತೆ, ಪರಿಸರ, ಸ್ಥಳಾಂತರ ಮುಂತಾದ ವಿವಾದಗಳನ್ನು ಕುರಿತ ಚರ್ಚೆಗಳಲ್ಲಿ, ಆಂದೋಲನಗಳಲ್ಲಿ ಪಾಲ್ಗೊಳ್ಳಲಾಗಿದೆ.
- ಸ್ವಸಹಾಯ ಸಂಘಗಳನ್ನು ರಚಿಸುವ ಮೂಲಕ ಮಹಿಳೆಯರ ಸಬಲತೆಗೆ ಪ್ರೋತ್ಸಾಹ ನೀಡಲಾಗಿದೆ.
- ನಮ್ಮದೇ ಮಿತಿಯಲ್ಲಿ ತೊಂದರೆಗೊಳಗಾದ ಮಹಿಳೆಯರಿಗೆ ಸಲಹೆ, ನೈತಿಕ ಬೆಂಬಲಗಳಲ್ಲದೆ ಕಾನೂನಿನ ನೆರವನ್ನು ನೀಡುತ್ತಿದ್ದೇವೆ.
- ಮಹಿಳೆಯರು ತಾವಿದ್ದೆಡೆಯಲ್ಲಿ ಮಹಿಳಾ ಪತ್ರಿಕೆಗಳನ್ನು ಹೊರತರಲು ಪ್ರಯತ್ನಿಸಿದಲ್ಲಿ, ಗುಂಪುಗಳನ್ನು ರಚಿಸಬೇಕಾದಲ್ಲಿ ಸಹಕರಿಸಲು ಉದ್ದೇಶಿಸಿದ್ದೇವೆ.

Registered Magazine

*Posted on 9th of every month at Chamarajpet Post Office*

ವಿಳಾಸ :
ನಮ್ಮ ಮಾನಸ
114/5, 9ನೇ ಕ್ರಾಸ್, 2ನೇ ಮುಖ್ಯರಸ್ತೆ, ಚಾಮರಾಜಪೇಟೆ
ಬೆಂಗಳೂರು - 560 018